# ತಣ್ಣಗಿನ ಬೆಂಕಿ

(ವ್ಯಾಸರ ಆತ್ಮ ಚರಿತ್ರೆ)





## ಸತ್ಯಕಾಮ




1999

ಸ್ವಯಂ ಪ್ರಕಾಶ-ನ

ಕಲ್ಲಹಳ್ಳಿ

ಜಮಖಂಡಿ.

**TANNAGINA BENKI :** A Novel on the life of Sri Vedavyasa by Sri Satyakama, Post - Kallahalli, Tq. Jamkhandi, Dist. Bagalkot - 587 119 Karnataka.

**Publishers :** Swayam Prakasha-na
Satyakamara Totada Mane
Post : Kallahalli
Tq. Jamkhandi.
Bagalkot - 587 119
✆ : (08353) 21344

**First Edition** : 1999 ( 2000 copies )



**Pages** : 2+120

**Price** : Rs. 75

**Cover Design** : Ganjeefa Raghupati Bhat

**Computer type set & Printed at :**

Nandini Offset Jamkhandi-587301. ✆ : 22558, 20181

**Sole Distributers** : Bannanje Associates
"Ishavasyam" Ambalapady
Udupi - 576 103
✆ : 21047 / 25396 (08252)





# ಹಾಲು ಜೀವನದಲ್ಲಿ ಹುಳಿಯ ಹನಿ

ನಾನು ಆಗ ತುಂಬ ಚಿಕ್ಕವನು.

ಅಜ್ಜಿ ಹೇಳುತ್ತಿದ್ದಳು ನನಗಾಗ ಏಳು ತುಂಬಲಿಲ್ಲ ಎಂದು. ನನ್ನ ಅಜ್ಜ ಸತ್ತಿದ್ದನ್ನು ನಾನು ನೋಡಿರಲಿಲ್ಲ. ಆದರೆ ನನ್ನೆದಿರು ಅವಳೆಂದೂ ಅತ್ತಿಲ್ಲ. ಅವಳೊಬ್ಬಳೇ ಇದ್ದಾಗ ಆಕೆ ಅಳುತ್ತಲೆ ಕುಳಿತುದ್ದನ್ನು ನಾನು ಅದೆಷ್ಟೊಸಲ ಕದ್ದು ನೋಡಿದ್ದೆ. ನಾನು ಬರುತ್ತಲೆ ಕಣ್ಣುಜ್ಜಿಕೊಂಡು ನಗಹತ್ತಿದ್ದನ್ನು ಹಲವು ಬಾರಿ ನೋಡಿದ್ದೇನೆ.

ಅಂದು ಎಂದಿನಂತೆ ಹೊರಗೆ ಹೋಗಿದ್ದೆ. ನಮ್ಯನ ತಾಯಿ ಹೊಸ ಬಟ್ಟೆಹಾಕಿಕೊಂಡು, ಹೂವು ಮುಡಿದುಕೊಂಡು ಹಣ್ಣುಕಾಯಿಗಳ ತಟ್ಟೆ ಹಿಡಿದು ಹೊರಗೆ ಹೋಗಬೇಕು. ಅಂಗಳದಲ್ಲಿ ನನ್ನೊಡನೆ ನಮ್ಯ ಆಡುತ್ತಿದ್ದ.

ನಮ್ಯ ನೀರಿಗಿಳಿಯಲಾಗದೆ ಮೇಲೆಯೆ ನಿಂತುಕೊಂಡಿದ್ದ. ನಾನು ಒಂದು ಹಣ್ಣು ಸುಲಿದು ಬಾಯಿಗಿಟ್ಟೆ. ಇನ್ನೊಂದನ್ನು ನಮ್ಯನಿಗೆ ಕೊಡಲು ಕೈಚಾಚಿದೆ. ನಮ್ಯನಿಗೆ ಅಷ್ಟೇ ಅಪಮಾನವೆನ್ನಿಸಿತು. ಅವನು ಓಡಿ ತನ್ನ ತಾಯಿಯ ಸೆರಗು ಹಿಡಿದು ''ಹಣ್ಣು'' ಎಂದು ಹಟಮಾಡಹತ್ತಿದ. ತಾಯಿ ತಟ್ಟೆಯಿಂದ ನಾಲ್ಕು ಹಣ್ಣು ತೆಗೆದುಕೊಟ್ಟಳು.

ಕೇಕೆ ಹಾಕುತ್ತ ನಮ್ಯ ಕುಣಿದಾಡ ಹತ್ತಿದ

''ನನಗೆ ಅಮ್ಮ ಕೊಟ್ಟಳು...........''

''ನೀರೊಳಗೆ ಬಿದ್ದುದನ್ನು ನೀನು.........''

ನಮ್ಯನ ಮಾತು ಎದೆಗೆ ನಾಟಿತು. ಹಣ್ಣನ್ನು ನಾನು ನೀರಿಗಿಳಿದೇ ತಂದಿದ್ದೆ. ಆದರೆ ಈಗ ''ಅಮ್ಮ ಕೊಟ್ಟಳು'' ಎಂದಿದ್ದ. ನಾನು ಹಾಗೆ ಅನ್ನಲು ಇಲ್ಲ. ಕೈಯಲ್ಲಿದ್ದ ಹಣ್ಣನ್ನು ಮತ್ತೆ ನದಿಗೆ ಬೀಸಿ ಒಗೆದೆ. ಕಂಡಾಬಟ್ಟಿ ಕೋಪ ಬಂದುಬಿಟ್ಟಿತ್ತು ಅಜ್ಜಿಯಮೇಲೆ. ಅವಳೂ ಏಕೆ ಹೊಸ ಬಟ್ಟೆ ಉಟ್ಟುಕೊಂಡು ನದಿಗೆ ಬರಬಾರದು? ನಮ್ಯನ ತಾಯಿಯ ಹಾಗೆ ಅವಳು ನನಗೆ ಹಣ್ಣು ಕೊಡಬೇಕಿತ್ತು. ಏಕೆ ಕೊಡಲಿಲ್ಲ?

ದಾರಿಯಲ್ಲಿ ಬೀಳುವುದನ್ನೂ ಲೆಕ್ಕಿಸದೆ ಓಡುತ್ತಿದ್ದೆ. ನಮ್ಮ ಎಲೆಮನೆಯ ಬಾಗಿಲು ತೆರದೇ ಇತ್ತು. ಕಕ್ಕಾಪಿಕ್ಕಿಯಾಗಿ ಅಜ್ಜಿಯನ್ನು ಅತ್ತಿತ್ತ ಹುಡುಕಿದೆ; ಕಾಣಲಿಲ್ಲ.

ಈ ಮುದುಕಿ ಸದಾ ದೇವರ ಮುಂದೆಯೇ ಸಾಯುತ್ತದೆ ಎಂದವನೆ ದೇವರ ಮನೆಗೆ ಜಿಗಿದೆ. ಹೋಗಿ ಕಾಲು ಅಪ್ಪಳಿಸಿದೆ. ಅಜ್ಜಿ ಮಿಸುಕಲಿಲ್ಲ, ಗಟ್ಟಿಯಾಗಿ ''ಅಜ್ಜೀ'' ಎಂದು ಕೂಗಿದೆ. ದೇವರ ಮುಂದೆ ಕುಳಿತವಳು ಹೊರಳಿ ನೋಡಲಿಲ್ಲ ಕೂಡ. ನಾನು ಹೋಗಿ ಹಿಂದೆ ಸುಮ್ಮನೆ ನಿಂತುಕೊಂಡೆ. ಅಜ್ಜಿ ಬಿಕ್ಕಿ ಬಿಕ್ಕಿ ಅಳುತ್ತಾಳೆ. ನಾನು ಅವಳ ಪಕ್ಕಕ್ಕೆ ಕುಳಿತುಬಿಟ್ಟೆ. ಅಜ್ಜಿ ತುಂಬ ಗಟ್ಟಿಗಳು. ದೇವರನ್ನು ಮನಸಾರೆ ಬೈದಳು. ಇನ್ನೂ ಏನೋ ಅಂದಳು, ನನಗೆ ತಿಳಿಯಲಿಲ್ಲ. ಅದರಲ್ಲಿ ಹಲವು ಸಲ ಕಂದ-ಕಂದ ಎಂದು ಏನೋ ಹೇಳುತ್ತಿದ್ದಳು. ಅವಳಿಗೆ ಬಹಳ ದುಃಖವಾಗಿರಬೇಕು. ಅತ್ತೇ ಅತ್ತಳು.

ಎಷ್ಟೋ ಹೊತ್ತಿನ ಮೇಲೆ ಕಣ್ಣು ತೆರೆದಳು. ನಾನು ಮುಂದೆ ಕುಳಿತುದ್ದನ್ನು ಕಂಡು ಒಮ್ಮೆಲೇ ಎಳೆದುಕೊಂಡು ಎದೆಗವಚಿ ನನ್ನ ಹಣೆಗೆ ಮುತ್ತಿಟ್ಟಳು. ಮತ್ತೆ ಅವಳಿಗೆ ದುಃಖ ಬಂತು. ಆದರೆ ಅವಳು ಅದನ್ನು ಬಹಳ ಕಷ್ಟಪಟ್ಟು ನುಂಗಿಕೊಳ್ಳುತ್ತಿರುವುದು ನನಗೆ ಗೊತ್ತಾಗುತ್ತಿತ್ತು.

''ಕಂದಾ ದೇವರನ್ನು ನಮಸ್ಕರಿಸು.......'' ಅಜ್ಜಿ ಶೀರ್ಣ ಸ್ವರದಲ್ಲಿ ಹೇಳಿದಳು.

''ಅಜ್ಜೀ ಆಗಲೇ ನೀನು ಆತನನ್ನು ತುಂಬ ಬಯ್ಯುತ್ತಿದ್ದಿ. ನೀನು ಬಯ್ಯುವವನಿಗೆ ನಾನು ನಮಸ್ಕಾರ ಮಾಡುವುದಿಲ್ಲ...................''

''ಒಳಿತು ಅನ್ನು ಮಗು. ಹಾಗೆನ್ನಬಾರದು. ನಮಸ್ಕಾರ ಮಾಡು.''

ಅಜ್ಜಿಯ ಮಾತನ್ನು ನಾನೆಂದಿಗೂ ಮೀರಿರಲಿಲ್ಲ. ಎದ್ದು ನಮಸ್ಕಾರ ಮಾಡಿದೆ ''ಹೇಳು ಅಜ್ಜಿ ನಮಸ್ಕಾರ ಮಾಡಿದರೆ ಏನಾಗುತ್ತದೆ?''

ಅಜ್ಜಿ ಕಣ್ಣೊರೆಸಿಕೊಳ್ಳುತ್ತ ಹೇಳಿದಳು- ''ತುಂಬ ಒಳ್ಳೆಯದಾಗುತ್ತದೆ ಮಗು!''

''ಹಾಗಾದರೆ ನಿನಗೇಕಾಗಲಿಲ್ಲ?''

''ನನಗೂ ಆಗಿದೆ.''

''ಏನಾಗಿದೆ?''

''ನಿನ್ನಂತಹ ಕಂದನನ್ನು ಎತ್ತಿ ಆಡಿಸುವುದಿಲ್ಲವೆ?''

''ಹಾಗಾದರೆ ಮತ್ತೇಕೆ ಆತನನ್ನು ಬಯ್ಯುತ್ತಿದ್ದಿ?''

ಅಜ್ಜಿ ಮತ್ತೆ ನನ್ನನ್ನು ಎಳೆದು ಪಕಪಕನೆ ಮುತ್ತನ್ನಿಟ್ಟಳು. ನನಗೆ ಅಜ್ಜಿಯ ಮೇಲೆ ಬಂದ ಕೋಪವೆಲ್ಲ ಕರಗಿ ಹೋಗಿತ್ತು. ಏಕೋ ನನಗೂ ಗೊತ್ತಾಗಲಿಲ್ಲ.

ಯಮುನಾ ನದಿಯ ದಂಡೆಯ ಮೇಲೆ ನಮ್ಮದೊಂದೇ ಊರು. ಸುತ್ತುಗಟ್ಟಿ ನೀರು. ಅದನ್ನು ನಡುಗಡ್ಡೆ ಎಂದು ಕರೆಯುತ್ತಾರೆ. ಈ ದ್ವೀಪದಲ್ಲಿ ಹತ್ತಾರು ಮನೆಗಳು. ನದಿಯ ಆಚೆಯ ದಂಡೆಯಲ್ಲಿ ದೊಡ್ಡ ಊರು, ನಗರ ಇವೆ ಎಂದು ಅಜ್ಜಿ ಹೇಳುತ್ತಿದ್ದಳು. ನಮಗೆ ಗೊತ್ತಿರಲಿಲ್ಲ. ಅಜ್ಜಿ ನನ್ನನ್ನು ಒಂಟಿಯಾಗಿ ನದಿಯ ಕಡೆಗೆ ಎಂದೂ ಹೋಗಗೊಡುತ್ತಿರಲಿಲ್ಲ. ನನಗೆ ಆಗಾಗ ಹೊಳೆಯ ಕಡೆಗೆ ಹೋಗುವ ಹಂಬಲ. ಅಜ್ಜಿ ಪೂಜೆಗೆ ಕುಳಿತ ಸಮಯ ಸಾಧಿಸಿ ನಾನು ಓಟ ಕೊಡಬೇಕು.

ಹೋಗುವ ಮುಂದೆ ನಮ್ಮ, ಕುತ್ಸ ಯಾರಿದ್ದರೂ ಕರೆದುಕೊಂಡು ಹೋಗಬೇಕು. ಕುತ್ಸನಂತೂ ನದಿ ಎಂದರೆ ಹೆದರಿ ಸಾಯುತ್ತಿದ್ದ. ಒಮ್ಮೆ ಅವನನ್ನು ಎಳೆದುಕೊಂಡು ಹೋದಾಗ ಅಲ್ಲಿ, ನದೀ ದಂಡೆಯ ಮೇಲೆ ಅವನ ತಾಯಿ ನನ್ನ ಬೆನ್ನ ಮೇಲೆ ಅಂಗೈ ಮೂಡಿಸಿದಳು. ಮನೆಗೆ ನನ್ನನ್ನು ರಟ್ಟೆ ಹಿಡಿದು ಎಳೆದು ತಂದು ಅಜ್ಜಿಯ ಎದುರು ಸಿಕ್ಕಾಪಟ್ಟೆ ಬೈದಳು. ಅಜ್ಜಿಗೆ ಅವಳ ಬೈಗಳ ಕಡೆಗೆ ಲಕ್ಷ್ಯವಿಲ್ಲ. ನನ್ನ ಬೆನ್ನ ಮೇಲೆ ಮೂಡಿದ ಅವಳ ಕೈ ನೋಡಿ ಅವಳ ಕಣ್ಣಲ್ಲಿ ನೀರೂರಿತು.



ಕುತ್ಸನ ತಾಯಿ ಬಾಯಿ ಸೋಲುವವರೆಗೂ ಬೈದು ಹೋದಳು. ಅವಳು ಹೋದ ಬಳಿಕ ಅಜ್ಜಿ ನನ್ನ ಬೆನ್ನ ಮೇಲೆ ಕೈಯಾಡಿಸಿ-

''ಕಂದ ನದಿಗೆ ಹೋಗಬಾರದು! ಅದರಲ್ಲೂ ಇನ್ನೊಬ್ಬರನ್ನಂತೂ ಕರೆದುಕೊಂಡು ಹೋಗಬೇಡ...........''

''ಅಜ್ಜಿ, ನದಿ ನೋಡಬೇಕು ಎನ್ನಿಸುತ್ತದೆ.''

''ನಾನು ಬಂದು ತೋರಿಸುತ್ತೇನೆ. ನೀನೊಬ್ಬನೇ ಹೋಗಬೇಡ..............''

ಅಂದಿನಿಂದ ನಿತ್ಯ ಸಾಯಂಕಾಲ. ನನ್ನ ಕೈಹಿಡಿದುಕೊಂಡು ಅಜ್ಜಿ ಯಮುನಾ ತೀರಕ್ಕೆ ಕರೆದುಕೊಂಡು ಹೋಗುವಳು. ನಮ್ಮ ದ್ವೀಪಕ್ಕೆ ಹೊರಗಿನಿಂದ ಜನರೂ ಬರುವುದು ಕಡಿಮೆ. ಇಲ್ಲಿಯವರೇ ಯಾವಾಗಲಾದರೂ ಆಚೆಗೆ ಹೋಗುವರು. ಎಂದಾದರೊಂದು ದಿನ ನಮ್ಮ ದಡಕ್ಕೆ ದೋಣಿ ಬಂದರೆ ನಾವೆಲ್ಲ ಅದನ್ನು ಬಹು ಚಕಿತವಾಗಿ ನೋಡುತ್ತಿದ್ದೆವು.

ನನ್ನ ಅಜ್ಜಿಯ ಹೆಸರು ದೃಶ್ಯಂತಿ ಎಂದು ಬಹಳ ದಿನದ ಮೇಲೆ ಗೊತ್ತಾಯಿತು. ನಾನಷ್ಟು ದಿನ ಅವಳ ಹೆಸರೇ ಅಜ್ಜಿ ಎಂದು ತಿಳಿದಿದ್ದೆ. ಒಂದು ದಿನ ಕುತ್ಸನ ತಾಯಿ, ಶೂದ್ರ ಹೆಂಗಸೊಬ್ಬಳಿಗೆ ಸೌದೆ ತೆಗೆದುಕೊಂಡು ಹೋಗಿ ದೃಶ್ಯಂತಿ ಮನೆಗೆ ಹಾಕು ಎಂದಳು.

ನನಗೆ ನಮ್ಮ ಒಣೆಯವರ ಹೆಸರು ಎಲ್ಲ ಗೊತ್ತು. ಆದರೆ ಈ ದೃಶ್ಯಂತಿ ಗೊತ್ತಾಗಲಿಲ್ಲ. ಶೂದ್ರ ಹೆಂಗಸು ನಮ್ಮ ಅಂಗಳದಲ್ಲಿ ಸೌದೆ ಚೆಲ್ಲಿ-

''ತಾಯೀ ದೃಷ್ಯಂತೀ'' ಎಂದುಕೂಗಿದಳು. ಅಜ್ಜಿ ಒಳಗಿನಿಂದ ಓಡಿ ಬಂದು ಸೌದೆಯನ್ನು ಒಪ್ಪಿಕೊಂಡು ಅವಳಿಗೆ ಮೊರದ ತುಂಬ ಯವ ಹಾಕಿ ಕಳಿಸಿದಳು. ಆಗಲೆ ನಾನು ಅಜ್ಜಿಯನ್ನು ಕೇಳಿ ಅವಳ ಹೆಸರು ಅದೇ ಎಂದು ದೃಢಪಡಿಸಿಕೊಂಡೆ. ಬಹಳ ದಿನಗಳು ಕಳೆದ ಮೇಲೆ ನನಗೆ ಮೆಲ್ಲನೆ ತಿಳಿಯಹತ್ತಿತು. ನನ್ನ ಮನೆಯಲ್ಲಿ ನನಗೆ ತಂದೆ ತಾಯಿಗಳಿಲ್ಲವೆಂದು. ಒಮ್ಮೆ ನಾನು ಅಜ್ಜಿಯನ್ನು ಕೇಳಿದ್ದೆ:

''ಅಜ್ಜಿ ನನಗೆ ತಂದೆ ಇಲ್ಲವೆ?''

''ಇರದೆ ಏನು ಮಗು?''

ನನ್ನ ಅಜ್ಜಿ ನನಗೊಬ್ಬ ತಂದೆ ಇರುವನೆಂದು ಹೇಳಿದಾಗಿನಿಂದ ನನಗೆ ರೆಕ್ಕೆ ಬಂದಂತಾಗಿದ್ದವು. ನನ್ನ ಜತೆಗೆ ಆಡುವಾಗ ನಾನು ಬುದ್ಧಿ ಕಸುವುಗಳಲ್ಲೆಲ್ಲ ನಮ್ಮ-ಕುತ್ತರನ್ನು ಹಿಂದೆ ಹಾಕುತ್ತಿದ್ದೆ. ಅವರು ಸೋಲುವ ಪ್ರಸಂಗದಲ್ಲಿ ಸುತ್ತು ಹಾಯ್ದು-

''ನಿನ್ನ ತಂದೆಯನ್ನು ತೋರಿಸು!''

ಎಂದಾಗ ನಾನು ಪೆಚ್ಚು ಮೋರೆ ಹಾಕಿಕೊಂಡು ಸೋಲು ಒಪ್ಪಿಕೊಂಡು ಬಿಡುತ್ತಿದ್ದೆ ನಾನು·ಅಜ್ಜಿಯನ್ನು ಇನ್ನೂ ಕೇಳಿದೆ.

''ಅಜ್ಜಿ, ನನ್ನ ತಂದೆ ಎಂಥವರಿದ್ದಾರೆ?''

ಅವಳು ತನ್ನ ಪಲ್ಲವಿಯಂತೆ ಹೇಳ ಹತ್ತಿದಳು. ಮೊದಲು ಕಣ್ಣೀರು. ಅದು ಆದ ಬಳಿಕ ಕತೆ ಹೇಳಬೇಕು. ಅಜ್ಜಿ ಅಳಲಾರದೆ ಆಡಿದ ಮಾತೇ ಇಲ್ಲ. ನನ್ನ ಹುಟ್ಟಿದ ಹಬ್ಬದಂದೂ ಅವಳು ಅತ್ತದ್ದೇ. ತಂದೆಯ ಕತೆ ಕೇಳಿದಾಗ, ಅಜ್ಜನ ಮಾತು ತೆಗೆದಾಗ ನಮ್ಮ ಅಜ್ಜಿಗೆ ಅಳುವು. 'ಅಳುವು' ಎಂದೆ ಹೆಸರಿಡಬಾರದೆ ಅವಳ ತಾಯಿ ಎಂದು ನನಗೆ ಅನ್ನಿಸಿ ಹೋಗಿತ್ತು. ಸೆರಗಿನಿಂದ ಕಣ್ಣೊರೆಸಿಕೊಂಡು ಅವಳು ಹೇಳಿದಳು:

''ಮಗು ನಿನ್ನ ತಂದೆ ತುಂಬ ದೊಡ್ಡವರು!''

''ನಮ್ಮನ ತಂದೆಗಿಂತ ದೊಡ್ಡವರೇ ಅಜ್ಜಿ?''

ಅಜ್ಜಿಗೆ ಮತ್ತೆ ಅಳು. ನಾನು ಈ ಪರ್ವವನ್ನು ಬಿಟ್ಟೆ. ಅವಳ ಮಾತಿಗೆ ಗಮನ ಕೊಡುತ್ತಿದ್ದೆ.

''ಮಗು ಇನ್ನೊಬ್ಬರ ಮಾತು ಬೇಡ. ನಿನ್ನ ತಂದೆಯಷ್ಟು ದೊಡ್ಡವರು ಈ ದೇಶದಲ್ಲಿಯೆ ಇಲ್ಲ. ರಾಜ ಮಹಾರಾಜರೆಲ್ಲ ಅವರ ಪಾದದಲ್ಲಿ ಬಿದ್ದು ಹೊರಳಾಡುತ್ತಾರೆ........''

ಅಜ್ಜಿಯ ಮಾತು ಅರ್ಧ ಅರ್ಧವಾಯಿತು. ಉಳಿದುದು ತಿಳಿಯಲಿಲ್ಲ. ಅದೇ ದಿನ ನಾನು ಸಂಜೆ ಬಯಲಲ್ಲಿ ಆಡಲು ಹೋದಾಗ ಹೆಮ್ಮೆಯಿಂದ ಎದೆ ಸೆಟೆಸಿ ನಮ್ಮನಿಗೆ ಹೇಳಿದೆ. ''ನಿಮ್ಮ ತಂದೆಗಿಂತ ನಮ್ಮಪ್ಪ ತುಂಬ ದೊಡ್ಡವರು ಕಣೋ

ಕುತ್ಸ ಬಂದು ನನ್ನ ಬೆನ್ನಲ್ಲಿ ತಿಪಿದ ಹಾಗೆ ಕೇಳಿದ-

''ನಿನಗೇನು ಗೊತ್ತೊ? ಎಂದಾದರೂ ನೋಡಿದ್ದೀಯಾ?

''ಅಪ್ಪ ಇದ್ದರೆ ಮನೆಗೆ ಬರದೆ ಇರುತ್ತಿದ್ದನೆ? ನೋಡು, ನಮ್ಮ ತಂದೆ ಮನೆಯಲ್ಲೇ ಇಲ್ಲವೆ?''

ನಮ್ಯ-ಕುತ್ಸರ ಮಾತು ನಿಜವೇ ಇತ್ತು. ನಾನು ನಮ್ಮ ತಂದೆಯನ್ನು ನೋಡಿರಲಿಲ್ಲ. ನಾನು ತಿಳಿದಂತೆ ನಮ್ಮ ಮನೆಗೆ ಆತ ಒಂದು ಸಲವೂ ಬಂದಿರಲಿಲ್ಲ.

ಅಜ್ಜಿ ಹೇಳಿದಳು: ''ನಿನ್ನ ತಂದೆ ಬಹಳ ದೊಡ್ಡವರು'' ಕುತ್ಸ-ನಮ್ಯರು ಹೇಳುತ್ತಾರೆ: ''ಅಪ್ಪ ಇದ್ದರೆ ಮನೆಗೆ ಬರದೆ ಇರುತ್ತಿದ್ದನೆ?''

ಈ ಎಳೆತದಿಂದ ನಾನು ಬಹಳ ಗಾಸಿಗೊಂಡಿದ್ದೆ. ಹೊರಗೆ ನಿತ್ಯವೂ ನಾನು ಒಂದಿಲ್ಲೊಂದು ಸೋಲು ಎದುರಿಸಬೇಕಿತ್ತು. ಆ ದಿನ ನಮ್ಯನ ತಂಗಿಗೆ ಹೆಸರಿಡುವುದಿತ್ತು. ಅವನ ಮನೆಯಲ್ಲಿ ತುಂಬ ಜನರು; ಓಡಾಟ. ನಾನೂ ಹೋಗಿದ್ದೆ. ದೂರದ ಮನೆಯ ವೀರಾತಾಯಿ ನನ್ನ ಕಡೆಗೆ ಬೆರಳು ಮಾಡಿ ತೋರಿಸುತ್ತ ಹೇಳುತ್ತಿದ್ದಳು.

''ನೋಡು! ಆ ಕೃಷ್ಣನನ್ನು! ದೇವರು ಕೊಟ್ಟ ಬಣ್ಣವೇ ಅವನಿಗೆ ಇಟ್ಟ ಹೆಸರಾಯಿತು. ಪಾಪ! ಆ ಮುದ್ದು ಮಗುವಿಗೆ ತಾಯಿ ತೊಟ್ಟಿಲಲ್ಲಿ ಹಾಕಿ ಹೆಸರಿಡಲಿಲ್ಲ. ಆದರೂ ಕೃಷ್ಣ ಎಲ್ಲರಿಗೂ ಮುದ್ದು.............''

ವೀರಾತಾಯಿ ನನ್ನನ್ನು ಬಹಳ ಪ್ರೀತಿಸುತ್ತಿದ್ದಳು. ಆದರೆ ನನಗೆ ತಾಯಿಯಿಲ್ಲದ ಮಗು ಎಂದುದು ನೋವು ಮಾಡಿತು.

ಕುತ್ಸನಿಗೆ ತಾಯಿ ಇದ್ದಾಳೆ.

ನಮ್ಯನಿಗೆ ಇದ್ದಾಳೆ.

ಆಚೆಯ ಮನೆಯ ಹುಡುಗನ ತಾಯಿಯೇ ವೀರಾ! ತಾಯಿ ಯಾರಿಗೆ ಇಲ್ಲ?

ಅಜ್ಜಿಗೆ?

ಕುತ್ಸನ ತಂದೆಗೆ?

ವೀರಾತಾಯಿಗೆ?

ತಾಯಿ ಇಲ್ಲ! ಎಲ್ಲ ದೊಡ್ಡವರಿಗೂ ತಾಯಿ ಇಲ್ಲ. ಆದರೆ ನಾನು ಚಿಕ್ಕವನಾಗಿದ್ದೆ. ನನಗೇಕಿರಬಾರದು? ಇಂತಹ ವಿಚಾರದಲ್ಲಿ ನಾನು ತುಂಬ ತಲೆಕೆಡಿಸಿಕೊಳ್ಳುತ್ತಿದ್ದೆ. ನನ್ನ ಶಂಕೆಗೆಲ್ಲ ಅಜ್ಜಿಯೆ ಉತ್ತರ ಕೊಡಬೇಕು. ನಾನು ಅಜ್ಜಿಯನ್ನು ಕೇಳಿದೆ.

''ಅಜ್ಜಿ ನನಗೆ ತಾಯಿ ಇಲ್ಲವೆ?''

ಯಥಾ ಪ್ರಕಾರವಾಗಿ ಅಜ್ಜಿಯ ಕಣ್ಣಲ್ಲಿ ಯಮುನೆ ತುಂಬಿ ತುಳುಕಿದಳು.

''ಎಲ್ಲ ಮಕ್ಕಳಿಗೂ ತಾಯಿ ಇದ್ದೇ ತೀರುವಳು''

''ನಿನಗೆ ಇರುವಳೆ.........?''

ನನ್ನ ಪ್ರಶ್ನೆಗೆ ಅಜ್ಜಿ ಅರ್ಧ ನಕ್ಕಳು; ಅರ್ಧ ಅತ್ತಳು!

''ನಾನು ದೊಡ್ಡವಳು.''

''ದೊಡ್ಡವರಿಗೆ ತಾಯಿ ಇರುವುದಿಲ್ಲ ಅಲ್ಲವೆ?''

ಈಗಂತೂ ಅಜ್ಜಿ ನಕ್ಕೇ ಬಿಟ್ಟಳು. ನನ್ನ ವಿಚಾರ ಅಜ್ಜಿಗೆ ಒಪ್ಪಿಗೆ ಎಂದು ಹಿಗ್ಗಿದ್ದೆ. ನನ್ನ ಉತ್ಸಾಹಕ್ಕೆ ಸ್ವಲ್ಪ ನೀರು ಬಿತ್ತು.

''ಹೋಗಲಿ ಅಜ್ಜಿ, ನನ್ನ ತಾಯಿ ಎಲ್ಲಿ?''

ಅಜ್ಜಿ ಮಾತಾಡಲಿಲ್ಲ. ನನ್ನನ್ನು ಎಳೆದು ಅಪ್ಪಿ ಎದೆಗೆ ಇಟ್ಟುಕೊಂಡು ಕಂಬನಿಗರೆದಳು. ಆದರೆ ನನಗೆ ತಿಳಿಯಿತು. ನನ್ನ ತಂದೆಯ ಸಮಾಚಾರ, ತಾಯಿಯ ಸುದ್ದಿ ಅಜ್ಜಿಯ ಅಳುವನ್ನು ಕೆದರುತ್ತಿದೆ ಎಂದು.

ಹೆಜ್ಜೆ ಹೆಜ್ಜೆಗೆ ಮನೆಯೊಳಗೆ, ಹೊರಗೆ ನನ್ನ ತಂದೆ ತಾಯಿಯ ಬಗ್ಗೆ ಮನಸ್ಸು ಕುದಿಯುತ್ತಿತ್ತು. ಅಜ್ಜಿಯೆ ಹೇಳದ ಸುದ್ದಿಯನ್ನು ನನಗೆ ಯಾರು ಹೇಳಬೇಕು? ಮಂದಿಯನ್ನು ನಾನೆಂದೂ ಈ ಬಗ್ಗೆ ಕೇಳಲಿಲ್ಲ. ನನ್ನ ಹಾಲು ಜೀವನದಲ್ಲಿ ಇವೆರಡು ಹುಳಿಯ ಹನಿಗಳು.

ತಂದೆ?

ತಾಯಿ?



# ದೋಣಿ ಸಾಗಿತು

"ನಾಳೆ ನಿನ್ನ ತಂದೆ ಬರುವರು."

ಆಟದಿಂದ ಮನೆಗೆ ಮರಳಿದಾಗ ಅಜ್ಜಿ ಹೇಳಿದಳು! ಗೆಳೆಯರಿಲ್ಲದಿದ್ದರೂ ನಾನೇ ಮನೆಯಲ್ಲಿ ಕೇಕೆ ಹಾಕಿ ಕುಣಿದಾಡಿದೆ. ನಾನು ನಕ್ಕಷ್ಟು ಅಜ್ಜಿಗೆ ಅಳು. ನನ್ನ ಹಿಗ್ಗಿನ ತೂರಾಟದಲ್ಲಿ ಅಜ್ಜಿ ಅತ್ತರೆ ಅಳಲಿ ಎಂದು ಸುಮ್ಮನಿದ್ದೆ. ಅಜ್ಜಿಗೆ ಅಳು ಹೊಸತಲ್ಲ. ನನಗೆ ತಂದೆ ಬರುವನು ಎಂಬದಕ್ಕಿಂತ ಇನ್ನೇನು ಹೊಸತು ಇರಬೇಕು?

ಓಡಿ ಹೋಗಿ ಗೆಳೆಯರಿಗೆ ಹೇಳಿ ಬಂದುಬಿಡಬೇಕೆಂದು ಹೊರಗೆ ಹಾರುವವ. ಅಜ್ಜಿ ಬಂದು ಕೈ ಹಿಡಿದು ತಡೆದಳು.

"ಕಂದ, ಮುಚ್ಚಂಜೆಯ ಹೊತ್ತಿನಲ್ಲಿ ಹೊರಗೆ ಹೋಗಬಾರದು. ರಾಕ್ಷಸರು ತಿರುಗುವ ಹೊತ್ತು ಇದು." ಕುದಿಯುತ್ತಿರುವ ಉತ್ಸಾಹ ತಣ್ಣಗಾಯಿತು. ಅಜ್ಜಿ ಮೇಲಿಂದ ಮೇಲೆ "ರಾಕ್ಷಸರು, ರಾಕ್ಷಸರು" ಎಂದು ಹೇಳುತ್ತಿದ್ದಳು. ಅವಳಿಗೇಕೋ ಅವರ ಭಯ ಬಹಳ. ಎಲ್ಲ ಹೆಣ್ಣು ಮಕ್ಕಳೂ ಹಾಗೆ ಹೇಳುತ್ತಿದ್ದರು. ಹೆಣ್ಣು ಮಕ್ಕಳೇಕೆ ಹಿರಿಯರೂ ರಾಕ್ಷಸರಿಗೆ ಹೆದರುತ್ತಿದ್ದರು. ಆದರೆ ನಾನು ಒಮ್ಮೆಯೂ ಅವರನ್ನು ಕಂಡಿರಲಿಲ್ಲ. ಕುತ್ಸನ ಅಜ್ಜಿ ಒಮ್ಮೆ ಯಜ್ಞ ಮಾಡಿದ್ದರಂತೆ. ಒಂದು ದೊಡ್ಡ ರಾಕ್ಷಸ ಬಂದು ಯಜ್ಞವನ್ನೆಲ್ಲ ಕೆಡಿಸಿ ಅವರನ್ನು ಹೊತ್ತುಕೊಂಡು ಹೋಯಿತಂತೆ. ಆ ಮೇಲೆ ಈ ನಮ್ಮ ದ್ವೀಪದಲ್ಲಿ ಯಾವ ರಾಕ್ಷಸನೂ ಬಂದಿಲ್ಲವಂತೆ!

ಆದರೂ ಎಲ್ಲರಿಗೂ ಅವರ ಹೆದರಿಕೆ ತಪ್ಪಿಲ್ಲ.

ಅಜ್ಜಿ ರಾಕ್ಷಸರಿಗೆ ಹೆದರುತ್ತಿದ್ದರೂ ಅವರ ಒಂದೂ ಕತೆಯನ್ನು ನನ್ನ ಮುಂದೆ ಹೇಳಿರಲಿಲ್ಲ. ನಾನು ಕೇಳಿದ್ದು ಎಲ್ಲ ರಾಕ್ಷಸರ ಕತೆಯನ್ನು ಹೊರಗಿನವರಿಂದಲೆ! ಎಂದಾದರೂ ನಾನು ಅಜ್ಜಿಯನ್ನು ಪೀಡಿಸಿ ಕಾಡಿಸಿ ರಾಕ್ಷಸರ ಒಂದು ಕತೆ ಹೇಳು ಎಂದರೆ ಅವಳು ಕಿಡಿ ಕಿಡಿಯಾಗುವಳು. ಅವಳ ಕೋಪ ನೋಡಬೇಕಾದರೆ ರಾಕ್ಷಸರ ಸುದ್ದಿ ತೆಗೆಯಬೇಕು. ನಾನು ಆ ಗೊಡವೆಗೆ ಹೋಗುತ್ತಿದ್ದಿಲ್ಲ.

ತಂದೆ ಬರುವರು! ಇದಕ್ಕಿಂತ ಇನ್ನೊಂದು ದೊಡ್ಡ ಸುದಿನ ಆಗ ನನಗೇನಿರಬೇಕು? ಅಜ್ಜಿ ನನ್ನ ಕಾಲು ತೊಳೆದು ಉಣ್ಣಲು ನೀಡಿದಳು. ನನಗೆ ಹಿಗ್ಗಿನ ಭರದಲ್ಲಿ ಊಟ

ಹೋಗಲಿಲ್ಲ. ತಂದೆ ಬರುವರು ಎಂಬ ಮಾತನ್ನು ಕೇಳಿಯೆ ನನ್ನ ಹಸಿವು ಹಾರಿ ಹೋಗಿತ್ತು. ಹಾಲು ಕುಡಿದಂತೆ ಆಗಿತ್ತು. ಅಜ್ಜಿ ನಾನು ಊಟ ಮಾಡದ್ದನ್ನು ಕಂಡು ಕೇಳಿದಳು.

''ತಂದೆ ಬರುವನೆಂದರೇ ಊಟ ಬಿಟ್ಟೆ. ಬಂದ ಬಳಿಕ ನಿನ್ನನ್ನು ಯಾರು ಹಿಡಿಯಬೇಕು?''

ಅಜ್ಜಿಯ ಮಾತು ಯೋಗ್ಯವೇ ಇತ್ತು. ನಾನು ಎಲೆಯ ಮುಂದೆ ಕುಳಿತು ಎರಡು ತುತ್ತು ಗಂಟಲಿಗಿಳಿಸಿ ಕೈ ತೊಳೆದುಕೊಂಡೆ. ತಲೆಯಲ್ಲೆಲ್ಲ ತಂದೆ ಬಂದರೆ ನಾನು ಏನೇನು ಮಾಡಬೇಕು? ಅವರಿಂದ ಯಾವ ಯಾವ ವಸ್ತು ಇಸಿದುಕೊಳ್ಳಬೇಕು- ದೂರದಿಂದ ಅವರು ಬರುವರೆಂದು ಅಜ್ಜಿ ಹೇಳುತ್ತಾಳೆ. ನನಗೆ ಏನೇನು ತರುವರೊ? ಒಂದಲ್ಲ ನೂರಾರು ವಿಚಾರ!

ಅಜ್ಜಿ ನನಗಾಗಿ ಹಾಸಿಗೆ ಹಾಸಿದಳು. ನಾನು ಅದರ ಮೇಲೆ ಹೊರಳಾಡಿದೆ. ತಲೆಯಲ್ಲಿ ನಾಳಿನ ಕಾರ್ಯಕ್ರಮ ಕುರಿತು ತುಂಬ ಯೋಚನೆ ನಡೆದಿತ್ತು. ಯಾವುದಕ್ಕೂ ನಿಶ್ಚಿತ ರೂಪವಿರಲಿಲ್ಲ. ಅಜ್ಜಿ ದೇವರ ಮನೆಯಲ್ಲಿ ಪ್ರಾರ್ಥನೆ ಮಾಡುತ್ತಿದ್ದಳು. ತಂದೆಯ ಬಗ್ಗೆ ಇನ್ನೂ ವಿವರ ಕೇಳಬೇಕೆಂದು ಮನಸ್ಸಾಯಿತು. ಓಡಿ ಹೋದೆ. ಪೂಜೆಗೆ ಕುಳಿತಾಗ ಅವಳನ್ನು ಮಾತನಾಡಿಸಬಾರದೆಂಬ ನಿಯಮ ಇತ್ತು. ನಾನು ಉತ್ಸಾಹ ಭಂಗದಿಂದ ಹಿಂತಿರುಗಿ ಬಂದೆ.

ಪ್ರಾರ್ಥನೆ ಮುಗಿಸಿ ಅಜ್ಜಿ ಸಾಯಂಕಾಲದ ಫಲಾಹಾರ ತೀರಿಸಿಕೊಂಡು ಬಂದಳು. ನಾನು ಹಾಸಿಗೆಯ ಮೇಲೆ ಇನ್ನೂ ಹೊರಳಾಡುತ್ತಿದ್ದೆ. ಅಜ್ಜಿ ಸಂಜೆ ಫಲಾಹಾರ ಮಾಡುವುದನ್ನೂ ಅವಳು ಮಲಗುವುದನ್ನೂ ನಾನು ನೋಡಿರಲೇ ಇಲ್ಲ. ಅವಳು ಬರುವುದರೊಳಗಾಗಿ ನಾನು ನಿದ್ದೆ ಹೋಗಿರಬೇಕು. ಬೆಳಗು ನಾನು ಏಳುವುದರೊಳಗಾಗಿ ಅಜ್ಜಿ ಸ್ನಾನ ಮಾಡಿ ಪೂಜೆಗೆ ಕುಳಿತಿರಬೇಕು. ಒಮ್ಮೊಮ್ಮೆ ನನಗೆ ಹೀಗೆ ಅನ್ನಿಸುವುದು: ಸಂಜೆ ಪೂಜೆಗೆ ಕುಳಿತ ಅಜ್ಜಿ ಬೆಳ್ಳಂಬೆಳಗೂ ಪೂಜೆ ಮಾಡುತ್ತಲೆ ಇರುವಳು ಎಂದು.

''ಇನ್ನೂ ನಿದ್ದೆ ಬರಲಿಲ್ಲವೆ? ಬೇಗ ಮಲಗು'' ಅಜ್ಜಿಯ ಮಾತಿನಂತೆ ಮಲಗಲು ಯತ್ನಿಸಿದೆ. ಸಾಧ್ಯವಾಗಲಿಲ್ಲ. ನಾನು ಅಜ್ಜಿಯ ಮಾತು ಮೀರಬಾರದೆಂದರೂ ನಿದ್ದೆ ಬರಲೊಲ್ಲದು. ಅಜ್ಜಿ ನಿದ್ದೆ ಹೋದಳು. ನನಗೆ ಬಹಳ ಹೊತ್ತು ಚಡಪಡಿಕೆಯಾಯಿತು. ಯಾವಾಗಲೊ ಒಂದರ್ಧಗಳಿಗೆ ಕಣ್ಣು ಮುಚ್ಚಿರಬೇಕು. ಮತ್ತೆ ಎಚ್ಚರ. ನಿದ್ದೆಯ ಗುದ್ದಾಟದಲ್ಲಿ ಅಜ್ಜಿಗೆ ಎಚ್ಚರವಾಯಿತು.

''ಇನ್ನೂ ಮಲಗಲೇ ಇಲ್ಲ?''

ಯಾವ ಪಾಪಿ ದೃಷ್ಟಿ ತಾಗಿತೋ ಕಂದನಿಗೆ - ನಿತ್ಯವೂ ಚೆಂದಾಗಿ ಮಲಗುವ ಹುಡುಗ ಇಂದೇಕೆ ಮಲಗಬಾರದು? ಎಂದು ಹೇಳಿಕೊಳ್ಳುತ್ತ ಅಜ್ಜಿ ನನ್ನನ್ನು ತನ್ನ ಚಾಪೆಯ ಮೇಲೆ ಕರೆದುಕೊಂಡು ಕೆನ್ನೆ ತಟ್ಟಿ ಮಲಗುವಂತೆ ಯತ್ನಿಸಿದಳು. ಅವಳ ಕೈ ಕೆಲಸ ಮಾಡಿ

ಒರಟಾಗಿತ್ತು. ಆದರೆ ಪ್ರೀತಿ ಬಹಳ ಮೃದುವಾಗಿತ್ತು. ಕಿಸ್ನೆ ತಟ್ಟುತ್ತಾ ಅಜ್ಜಿಯೂ ನಿದ್ದೆ ಹೋಗಿದ್ದಳು. ನಾನು ಮಾತ್ರ ಎಚ್ಚರವಾಗಿಯೆ ಇದ್ದೆ.

ಕೋಳಿ ಕೂಗಿತು! ಅಜ್ಜಿ ಎದ್ದಳು. ನಾನು ಎಚ್ಚರಿದ್ದುದು ಅವಳಿಗೆ ತಿಳಿಯಬಾರದೆಂದು ನಿದ್ರೆ ಮಾಡುವಂತೆ ಮಲಗಿದ್ದೆ. ಅಜ್ಜಿ ಹಾಗೇ ನಂಬಿದಳು. "ಈಗ ಮಲಗಿದನೋ ಏನೋ ಎಂದು ಮೆಲ್ಲನೆ ಎದ್ದು ಹೋದಳು. ನಾನು ಅರೆಗಣ್ಣು ತೆರೆದು ಅವಳು ಹೋದದ್ದನ್ನು ಹಣತೆಯ ಬೆಳಕಿನಲ್ಲಿ ಕಂಡೆ. ಅಜ್ಜಿ ನಾನು ಮಲಗಿದ್ದೇನೆ ಎಂದು ತಿಳಿದು ನಿತ್ಯ ಹೇಳುತ್ತಿದ ಪ್ರಾರ್ಥನೆಗಳನ್ನು ಬಹಳ ಮೆಲ್ಲನೆ ಹೇಳುತ್ತಿದ್ದಳು.

ಹೊರಗೆ ಬೆಳ್ಳಗೆ ಬೆಳಕಾಯಿತು. ಮನೆಯ ಮೂಲೆಯಲ್ಲಿ ಉರಿಯುವ ದೀಪದ ಮುಖ ಬೆಳ್ಳಗಾಯಿತು. ಕೊರಳೊಳಗಿನ ಮುತ್ತು ತಂಪು ಹತ್ತಿತು. ನಾನು ಎದ್ದು ಕುಳಿತೆ. ಆದರೂ ದಿನಕ್ಕಿಂತ ಬೇಗ! ಅಜ್ಜಿ ಇನ್ನೂ ಸ್ನಾನಕ್ಕೆ ಕೂಡ ಹೋಗಿದ್ದಿಲ್ಲ.

ಅಜ್ಜಿ ಸ್ನಾನಕ್ಕೆ ಹೋದಾಗ ನಾನು ನಮ್ಮನ ಮನೆಗೆ ಓಡಿ ತಂದೆ ಬರುವ ಸಮಾಚಾರ ಹೇಳಬೇಕೆಂದೆ. ನಮ್ಮ ಇನ್ನೂ ಹಾಸಿಗೆಯಲ್ಲಿ ಹೊರಳಾಡುತ್ತಿದ್ದ. ನಿದ್ದೆ ಹೋಗಿದ್ದ. ನಿರಾಶನಾಗಿ ಮರಳಿ ಮನೆಗೆ ಬಂದೆ. ಕುತ್ಸನ ಮನೆಗೆ ಹೋಗಬೇಕೆನ್ನಿಸಿತು. ಅವನೂ ಹೀಗೆಯೆ ಎನ್ನಿಸಿಬಿಟ್ಟು ಹೋಗಬೇಕೇ ಎನ್ನಿಸಿತು. ಆದರೆ ಅಜ್ಜಿ ಬರುವುದರೊಳಗಾಗಿ ಮರಳಿ ಬರುವುದು ಸಾಧ್ಯವಿರಲಿಲ್ಲ. ಬಿಟ್ಟುಬಿಟ್ಟೆ.

ನಿನ್ನೆಯೆ ಅಜ್ಜಿ ತುಂಬ ಹಣ್ಣು ಹಂಪಲು ತಂದಿದ್ದಳು! ಅದೆಷ್ಟು ಗೆಡ್ಡೆಗೆಣಸು ತರಬೇಕು. ತಂದೇ ತಂದಳು. ಎಷ್ಟು ತಂದರೂ ಅವಳಿಗೆ ತೃಪ್ತಿ ಇದ್ದಿಲ್ಲ. ಬೆಳಗಿನಲ್ಲಿ ನನಗೆ ಗಂಜಿ ಊಟ ಮಾಡಿಸಿದಳು. ಆಗೀಗ ನೆರೆ ಮನೆಯವರು ಮಾತನಾಡುತ್ತಿದರು.

ಕೃಷ್ಣನ ಉಪನಯನ! ಎಂದು.

ನನಗೆ ಬೇಗ ಉಪನಯನ ಮಾಡಿಕೊಳ್ಳುವ ತವಕ ಇತ್ತು. ನನ್ನ ಯಾವ ಗೆಳೆಯರಿಗೂ ಅದಿನ್ನೂ ಆಗಿದ್ದಿಲ್ಲ. ಅವರೊಳಗೆ ನಾನೆ ಮೊದಲಿನವನಾಗಬೇಕು! ಉಪನಯನವಾದರೆ ಆ ದೊಡ್ಡಸ್ತಿಕೆಯೆ ಬೇರೆ. ಆ ಬಳಿಕ ನಮಗೆ ಭೂತ-ಪ್ರೇತಗಳ ಭಯವಿಲ್ಲ. ಪುರೋಹಿತರು ಆಗಾಗ ಹೇಳುತ್ತಿದ್ದರು. ಯಜ್ಞೋಪವೀತ ತೋರಿಸಿದರೆ ಪಿಶಾಚಿಗಳು ಓಡಿ ಹೋಗುತ್ತವೆ ಎಂದು. ಅಂತಹ ಸೌಕರ್ಯ ನನಗೆ ಒದಗುವ ಸಮಯ ಬಂದುದಕ್ಕೆ ತುಂಬ ಹಿಗ್ಗಿದ್ದೆ.

ಅಂತೂ ತಂದೆ ಬಂದರು. ಆದರೇನು? ಅವರು ಬಂದದ್ದೇ ತಡ. ಮನೆ ತುಂಬ ಜನರು, ನಮ್ಮ ದ್ವೀಪವೇ ಕಿತ್ತು ಬಂದು ನಮ್ಮ ಮನೆಯಲ್ಲಿ ತುಂಬಿತು. ದ್ವೀಪದ ಗಂಡು, ಹೆಣ್ಣು ಎಲ್ಲ ಬಂದು ತಂದೆಯವರನ್ನು ಕಾಣಲು ನುಗ್ಗ ಹತ್ತಿದರು. ಅಜ್ಜಿ ಹೇಳಿದಂತೆ ಅವರು

ದೊಡ್ಡವರೇನೋ ಆಗಿದ್ದರು. ಏಕೆಂದರೆ ಊರಿಗೆಲ್ಲ ಹಿರಿಯರೂ ಪೂಜ್ಯರೂ ಆಗಿದ್ದ ಗೌತಮರೂ ತಂದೆಯವರಿಗೆ ನಮಸ್ಕರಿಸಿದರು. ಗೌತಮರು ತಂದೆಯನ್ನು ಅಪ್ಪಿಕೊಂಡು. ''ವಯಸ್ಸಿನಲ್ಲಿ ಚಿಕ್ಕವನಾದರೂ ನೀನು ಜ್ಞಾನವೃದ್ಧನಪ್ಪ'' ಎಂದರು. ಹಾಗೆಂದರೇನು ಅಂದು ನನಗೆ ತಿಳಿದಿರಲಿಲ್ಲ. ಆದರೂ ತಂದೆ ದೊಡ್ಡವರು ಎಂದರು- ಇಷ್ಟೆ ತಿಳಿದೆ.

ಜನರ ನೂಕು ನುಗ್ಗಲಿನಲ್ಲಿ ನನಗೆ ಚೆನ್ನಾಗಿ ತಂದೆಯವರ ಮುಖ ನೋಡುವುದು ಕೂಡ ಆಗಲಿಲ್ಲ. ನಾನಾಗಿಯೆ ಹೋಗಿ ಅವರ ಅಂಕ ದೇಶದಲ್ಲಿ ಕುಳಿತು ಕೊಳ್ಳುವ ಮನಸ್ಸೂ ಆಗಲಿಲ್ಲ. ಆದರೂ ಅವರ ಹತ್ತಿರ ಇರಬೇಕೆನ್ನಿಸುತ್ತಿತ್ತು. ಅದಕ್ಕಿಂತ ಹೆಚ್ಚಾಗಿ ಅವರೇ ನನ್ನ ಮುಂದೆ ಕರೆದು ಮಾತನಾಡಿಸಬೇಕು ಎನ್ನಿಸುವುದು. ಆದರೆ ಒಂದಕ್ಕೂ ಸಮಯ ಕೂಡಿಬರಲಿಲ್ಲ. ಜನ ಕರಗ ಹತ್ತಿತು. ನಾನು ಮನಸಿನಲ್ಲೆ ಎಣಿಸಹತ್ತಿದೆ. ತಂದೆಯ ಜತೆಗೆ ಮೊದಲು ಏನೆಂದು ಮಾತನಾಡಬೇಕು? ಅವರು ನನ್ನನ್ನು ಹೀಗೆ, ಹೀಗೆ ಕೇಳಿದರೆ ನಾನು ಅದಕ್ಕೆ ಏನು ಉತ್ತರ ಕೊಡಬೇಕು... ಮೊಗ ಸಾಲೆಯ ಕಂಬವನ್ನು ಆತು ನಾನು ಯೋಚನೆಯಲ್ಲಿ ಮಗ್ನನಾದಾಗ ಜನವೆಲ್ಲ ಕರಗಿ ಹೋಗಿತ್ತು. ತಂದೆಯವರು ನಡೆದು ಬಂದು ನನ್ನ ಬೆನ್ನ ಮೇಲೆ ಕೈಯಾಡಿಸಿ-

''ಏನು ಯೋಚಿಸುತ್ತಿದ್ದೀಯಾ?''

ಎಂದರು. ನನಗೊಮ್ಮೆಲೆ ಎಚ್ಚರಾಯಿತು. ನಾನು ಯೋಚಿಸುತ್ತಿದ್ದ ಸಮಸ್ಯೆ ತಾನಾಗಿ ಬಿಟ್ಟು ಹೋಗಿತ್ತು. ತಂದೆಯವರು ಮಾತನಾಡಿದ್ದಕ್ಕೆ ಉತ್ತರ ಕೊಡಬೇಕಿತ್ತು. ಸಾವರಿಸಿಕೊಂಡು ನಾನು ಹೇಳಿದೆ-

''ಏನೂ ಇಲ್ಲ ಸುಮ್ಮನೆ ಕುಳಿತಿದ್ದೆ........''ಇಷ್ಟು ಹೇಳಬೇಕಾದರೆ ನನಗೆ ಸಾಕಾಯಿತು. ಅಜ್ಜಿ ನನ್ನನ್ನು ಒಳ್ಳೆ ಮಾತುಗಾರ ಎಂದು ಹೊಗಳುತ್ತಿದ್ದಳು. ನೆರೆಮನೆಯವರೆಲ್ಲ ವಾಚಾಲನೆಂದು ಕರೆಯುತ್ತಿದ್ದರು. ಆದರೂ ತಂದೆಯ ಎದುರು ಬಂದು ಮಾತನಾಡುವುದಕ್ಕೆ ಅದೂ ಅವರು ಕೇಳಿದ ಒಂದು ಚಿಕ್ಕ ಪ್ರಶ್ನೆಗೆ ಉತ್ತರ ಹೇಳಬೇಕಾದರೆ ನಾನು ಬೆವತು ಹೋದೆ. ಮುಂದೆ ನನಗೆ ಮಾತು ಹೊರಡಲಿಲ್ಲ. ತಂದೆಯವರೇ ಏನೋ ಕೇಳಿದರು. ಸುಮ್ಮನೆ ಮೂಕನಂತೆ ಕುಳಿತೆ. ಉತ್ತರ ಕೊಡಲಿಲ್ಲ. ನಾನು ಉತ್ತರ ಕೊಡದಿರುವುದರ ಕಾರಣ ಅವರಿಗೂ ತಿಳಿದಿತ್ತು. ಮತ್ತೆ ದೊಡ್ಡವರೆಂದರೆ ಅಷ್ಟು ತಿಳಿಯದೆ ಇರುತ್ತದೆಯೆ ?

ಚಿನ್ನದ ತಂತಿಯಂತಹ ಜಡೆ, ಅದೇ ಬಣ್ಣದ ಗಡ್ಡಮೀಸೆಗಳ ಅಗಲವಾದ ಮುಖ. ನನ್ನ ತಂದೆಯನ್ನು ನೆನೆದರೆ ಯಾರಿಗೂ ನಮಸ್ಕಾರ ಮಾಡಬೇಕೆನ್ನುವಷ್ಟು ಪ್ರಭಾವ ಬೀರುವ ಮುಖ ಮುದ್ರೆ, ನನಗೆ ಈಗಲೂ ಒಮ್ಮೊಮ್ಮೆ ಅವರ ನೆನಪಾಗುತ್ತದೆ. ಮೊಟ್ಟ ಮೊದಲ ಸಲ ನಮ್ಮ ತಂದೆಯನ್ನು ಕಂಡ ದೃಶ್ಯ, ನನಗೆಂದೂ ಮರೆಯಲಾರದೆ ಇದೆ. ಏಕೆಂದರೆ ಆ ಯುಷ್ಯದಲ್ಲಿ ನಾನು ತಂದೆಯನ್ನು ನೋಡಿದ್ದು ಅದೇ ಮೊದಲ ಸಲ!

ನಾಳೆಯ ಮರುದಿನವೇ ನನ್ನ ಉಪನಯನ ಸಮಾರಂಭ. ಅಜ್ಜಿಗೆ ಹಿಡಿಸಲಾರದ ಹಿಗ್ಗು, ನಾನು ಓಣಿಯಲ್ಲೆಲ್ಲ ತಲೆ ಎತ್ತಿ ತಿರುಗಾಡಿದೆ. ಕುತ್ಸ ಹೇಳಿದ.

''ಉಪನಯನವಾದರೆ ದ್ವೀಪಾಂತರ ಹೋಗಬೇಕು. ಗುರುಗಳ ಮನೆಯಲ್ಲಿ ಸಾಕಷ್ಟು ದುಡಿಯಬೇಕು.''

''ಅಷ್ಟು ದುಡಿದರೇನೇ ವಿದ್ಯೆ ಬರುತ್ತದೆ-''

''ಉಪನಯನದ ಮರುದಿನವೆ ಮನೆ ಬಿಟ್ಟು ಹೋಗಬೇಕು'' ನಮ್ಮ ತನ್ನ ಉಪನಯನವಾಗದಿರುವಿಕೆಯನ್ನು ಸಮರ್ಥಿಸಿಕೊಳ್ಳುತ್ತ ಹೇಳಿದ. ಅವರಿಬ್ಬರೂ ಈಗ ಕೆಲ ದಿನಗಳ ಹಿಂದೆಯೆ ನನಗೆ ಹೇಳುತ್ತಿದ್ದರು. ಮುಂದಿನ ವರುಷ ನಮಗೆ ಉಪನಯನ, ನಾವು ಗುರುಕುಲಕ್ಕೆ ವಿದ್ಯಾಭ್ಯಾಸಕ್ಕೆ ಹೋಗುತ್ತೇವೆ!'' ಎಂದು. ಹಾಗೆ ಹೇಳುವಾಗ ಅವರ ಹೆಮ್ಮೆ ನೋಡಬೇಕಿತ್ತು. ತಂದೆ ತಾಯಿಗಳದೇ ಪರಿಚಯವಿಲ್ಲದ ಸ್ಥಿತಿಯಲ್ಲಿ ಉಪನಯನದ ಶಕ್ಯತೆ ನನಗೆ ತೋರಿದ್ದಿಲ್ಲ. ನಾನು ಸುಮ್ಮನಿದ್ದು ಬಿಟ್ಟಿದ್ದೆ.

ಈಗ ನನ್ನ ಮೂಗು ಮೇಲಾಗಿತ್ತು. ಅವರು ಉಪನಯನದ ಅಸ್ವಾರಸ್ಯವನ್ನು ಹೇಳಹತ್ತಿದ್ದರು. ನಾನು ಉಪನಯನ ಮಾಡಿಕೊಳ್ಳಲು ಬಹಳ ತವಕ ಪಡುತ್ತಿದ್ದೆ. ಎಲ್ಲ ದೊಡ್ಡವರಿಗೂ ಉಪನಯನವಾಗಿತ್ತು. ಉಪನಯನವಾದರೆ ನಾನು ದೊಡ್ಡವನಾಗಬೇಕಾದ ಮೊದಲನೆಯ ಕೆಲಸ ಮುಗಿದಂತಾಗುತ್ತಿತ್ತು. ಅಲ್ಲದೆ ಅಜ್ಜಿ ನನಗೆ ಹಲವಾರು ಸಲ ಹೇಳಿದ್ದಳು. ''ಉಪನಯನವಾದ ಬಳಿಕ ನಿನ್ನ ತಂದೆ ತನ್ನ ವಿದ್ಯೆಯನ್ನೆಲ್ಲ ನಿನಗೆ ಕೊಡುತ್ತಾರೆ'' ನಾನುಆಗ ಹುಚ್ಚನ ಹಾಗೆ ಕೇಳಿದ್ದೆ.



''ತಂದೆಯಲ್ಲಿ ನನಗೆ ಕೊಡುವಷ್ಟು ವಿದ್ಯೆ ಇದೆಯೆ?'' ಅಜ್ಜಿ ನಕ್ಕು ನನ್ನನ್ನು ಅಪ್ಪಿಕೊಂಡು ಹೇಳಿದಳು:

''ಕಂದಾ ಕೃಷ್ಣಾ, ಲೋಕದಲ್ಲಿಯ ವಿದ್ಯೆಗಳೆಲ್ಲ ತಂದೆಗೆ ಮುಖೋದ್ಗತ! ಸಿದ್ಧಿಗಳು ಅವರ ಮನೆಯ ಅಂಗಳದಲ್ಲಿ ಊಳಿಗ ಮಾಡುತ್ತವೆ........'' ಪುರೋಹಿತ ದರ್ಶಿಕರು ಮನೆಯಲ್ಲಿ ಶಿಷ್ಯರಿಲ್ಲದೆ ಆಳುಗಳಿಲ್ಲದೆ ಬರಿ ಸಿದ್ಧಿಯಿಂದಲೇ ಎಲ್ಲ ಕೆಲಸ ಮಾಡಿಸಿಕೊಳ್ಳುತ್ತಾರೆಂದು ಅಜ್ಜಿ ಹೇಳುತ್ತಿದ್ದಳು. ನಾನು ಮೊದಮೊದಲು ಸಿದ್ಧಿ ಎಂದರೆ ಅವಳೊಬ್ಬ ಶೂದ್ರ ಹೆಂಗಸಿರಬೇಕು, ಮನೆಯ ಕೆಲಸದವಳು ಎಂದು ತಿಳಿದಿದ್ದೆ. ಆದರೆ ಅಜ್ಜಿ ಹೇಳಿದಳು: ಅದು ತಪಸ್ಸಿನಿಂದ ಬರುವ ಕಸುವು ಎಂದು. ತಪಸ್ಸು ಎಂದರೂ ನನಗೆ ತಿಳಿದಿರಲಿಲ್ಲ.

ನನಗೆ ಸಮಸ್ಯೆ ಬಂದಾಗ ಅಜ್ಜಿಯೇ ವಿಶ್ವಕೋಶ. ಅವಳನ್ನು ಕೇಳಿದೆ. ಅವಳು ಒಂದೇ ಮಾತಿನಲ್ಲಿ ಹೇಳಿದಳು.

'ಮನಸ್ಸಿನಿಂದ ಮಾಡಿದ ವ್ಯಾಯಾಮಕ್ಕೆ ತಪ ಎನ್ನುತ್ತಾರೆ' ಎಂದು. ಶರೀರದ ವ್ಯಾಯಾಮ ನನಗೆ ಗೊತ್ತು. ಏಕೆಂದರೆ ನಮ್ಮ ದ್ವೀಪದ ಕ್ಷತ್ರಿಯ ಹುಡುಗರು ಅದನ್ನು ಮಾಡುತ್ತಿದ್ದರು. ಅವರ ವ್ಯಾಯಾಮ ಶಾಲೆಗಳನ್ನು ಹೊರಗಿನಿಂದಲೇ ನಿಂತು ನೋಡಿದ್ದೆವು. ಅಜ್ಜಿ ಹೇಳಿದ್ದು ತಿಳಿಯದಿದ್ದರೂ ಅದರ ನನ್ನ ಕಲ್ಪನೆ ಓಡಿಸಿ ಹೀಗೇ ಇರಬಹುದು ಎಂದು ಚಿಂತಿಸಿದ್ದೆ.

ನಾನು ಉಪನಯನ ಮಾಡಿಕೊಳ್ಳಲಿಕ್ಕೆ ಇಷ್ಟೆಲ್ಲ ಕಾರಣಗಳಿದ್ದವು. ಸಿದ್ಧಿಯ ಕಡೆಗೆ ಸೆಳೆತ, ವಿದ್ಯೆಯ ಕಡೆಗೆ ಹರಿತ, ದೊಡ್ಡವನಾಗುವ ಬಯಕೆ. ಇವುಗಳಲ್ಲಿ ನಾನು ಊರು ಬಿಡಬೇಕಾಗುವುದು ಎಂದು ನೋಡಲೇ ಇಲ್ಲ.

ಉಪನಯನದ ದಿನ! ದ್ವೀಪಾಂತರದಿಂದ ಜನ ಬಂದಿತ್ತು. ನಮ್ಮ ಮನೆಯಲ್ಲಿ ಉತ್ಸವದ ವಾತಾವರಣ ಇತ್ತು. ಎಲ್ಲ ಕಾರ್ಯಕ್ರಮಗಳೂ ಯಥಾವಿಧಿಯಾಗಿ ಜರುಗಿದವು. ತಂದೆಯವರು ಕರೆದು ತಮ್ಮ ತೊಡೆ ಮೇಲೆ ನನ್ನನ್ನು ಕೂರಿಸಿಕೊಂಡು ಗಾಯತ್ರಿ ಉಪದೇಶ ಮಾಡಿದರು! ಅವರ ಉಪದೇಶದಿಂದ ನಾನು ತತ್ತರಿಸುತ್ತಿದ್ದೆ. ನನ್ನ ಮೈ ಮೇಲೆ ಬಲವಾದ ಭಾರ ಬಿದ್ದಂತೆ ಎನ್ನಿಸುತ್ತಿತ್ತು.

ಅವರು ಹೇಳುವ ಮಾತು ನನಗೆ ಬರಿ ಕೇಳಿಸಲಿಲ್ಲ ಕಾಣಿಸುತ್ತಿತ್ತು. ಹುಚ್ಚನಾಗಿ ಹೋದೆ. ಮೈಯಲ್ಲಿ ಮಿಂಚು ಹರಿದಾಡಿದಂತಾಯಿತು, ಶರೀರ ಆಯಾಸಗೊಂಡಿತು. ಅವರ ಆ ಉಪದೇಶದಿಂದ ಮನಸ್ಸು ಕುದುರೆಯಂತೆ ಪುಟನೆಗೆಯಹತ್ತಿತು. ತಂದೆಯವರನ್ನು ಜನ ದೊಡ್ಡವರೆನ್ನುವುದು ನಿಜ ಎನ್ನಿಸಿತು. ಮೂರು ಬಾರಿ ಅವರು ಗಾಯತ್ರಿಯನ್ನು ಉಪದೇಶಿಸಿದರು. ಅದೆಷ್ಟು ಹಿಗ್ಗು ನನಗೆ ನಾನು ಚಿಕ್ಕವ. ಏನೂ ಅರಿಯದ ಹಸುಳೆ. ಒಂದೂ ನನಗೆ ತಿಳಿಯಲಿಲ್ಲ. ಹೃದಯದಲ್ಲಿ ಒಂದು ಬಗೆಯ ಹಿಗ್ಗು ಹುಮ್ಮಸ ಕುಣಿದಾಡಿದವು. ನಾನು ಮೈಯೊಡನೆ ಸೂರ್ಯಮಂಡಲದಲ್ಲಿ ತೇಲಾಡಿದೆ. ಸೂರ್ಯ ನನ್ನ ಜೀವದ ಕಣ್ಣುಗಳಲ್ಲಿ ಮೂಡಿ ಬಂದ ಹಾಗೆ ಎನ್ನಿಸಿತು.

ತಂದೆಯವರ ಮಾತಿನಲ್ಲಿ ಅಷ್ಟು ಪ್ರಭಾವವಿತ್ತು. ಅವರ ತೊಡೆಯಿಂದ ಎದ್ದವನೇ ಅವರ ಪಾದಗಳಲ್ಲಿ ಮೈಯಿಕ್ಕಿದೆನು. ಅವರು ತಮ್ಮ ಶಾಂತ ದೃಷ್ಟಿಯಲ್ಲಿ ನನ್ನನ್ನು ಎರೆದು ಭುಜ ಹಿಡಿದೆತ್ತಿ........

''ಏಳು ಲೋಕದ ಕಣ್ಣಾಗಿ ಬಾಳು. ದೇವತೆಗಳನ್ನು ಭೂಮಿಗೆ ತಂದು, ಈ ಲೋಕದವರನ್ನು ಸ್ವರ್ಗಕ್ಕೆ ಕರೆದೊಯ್ದು ಕೀರ್ತಿಶಾಲಿಯಾಗು''

ತಂದೆ ಹೇಳಿದ ಮಾತಿನ ಅರ್ಥ ನನಗಾಗದಿದ್ದರೂ ಅವರ ಮಾತು ನಾನು ಹೋಗುವ ದಾರಿಯನ್ನು ನಿಚ್ಚಳವಾಗಿ ತೋರಿಸಿ ಬಲ ಕೊಟ್ಟು ನಡೆಯ ಹಚ್ಚಿತು.

ಅದೇ ದಿನ ಮಾತೃಭೋಜನದ ಸಂದರ್ಭ! ನೆರೆಮನೆಯ ಹೆಣ್ಣು ಮಕ್ಕಳೆಲ್ಲ ನೆರೆದಿದ್ದರು. ನನ್ನ ಕೌಪೀನದ ತುದಿಯಲ್ಲಿ ಅಪೂಪ ಕಟ್ಟಿಕೊಟ್ಟರು! ನಮ್ಮನ ತಾಯಿ,

''ಅವನ ತಾಯಿ ಇದ್ದರೆ ಇನ್ನೇನನ್ನು ಕಟ್ಟಿಕೊಡುತ್ತಿದ್ದಳೋ ಪಾಪ! ತಬ್ಬಲಿ...'' ನಾನು ಉತ್ಸಾಹದ ಶಿಖರದಿಂದ ಒಮ್ಮೆಲೆ ಉರುಳಿ ಬಿದ್ದೆ. ಏನೋ ನೋವೆನ್ನಿಸಿತು. ಹೋಗಿ ಒಂದು ಮೂಲೆಯಲ್ಲಿ ಖಿನ್ನನಾಗಿ ಕುಳಿತೆ. ಉತ್ಸಾಹದ ತೊಡಕಿನಲ್ಲಿ ಸಿಕ್ಕಿದ್ದ ಅಜ್ಜಿಯನ್ನು ಆರೆಂಟು ಗಳಿಗೆ ನಾನು ನೋಡಿರಲೆ ಇಲ್ಲ. ಯಾರೋ ಹೋಗಿ ಅವಳಿಗೆ ಹೇಳಿರಬೇಕು. ''ಕೃಷ್ಣ ಯಜ್ಞ ಮಂಟಪದ ಮೂಲೆಯಲ್ಲಿ ಅಳುತ್ತಾನೆ'' ಎಂದು. ಅಜ್ಜಿ ನನಗಿಂತ ರಂಬಾಟ ಮಾಡುತ್ತಲೇ ಧಾವಿಸಿ ಬಂದಳು. ನನ್ನನ್ನು ದೇವರ ಮನೆಗೆ ಕರೆದುಕೊಂಡು ಹೋದಳು. ನಾನೆಂದೂ ತಿಂಡಿ ತೀರ್ಥಕ್ಕಾಗಿ ಅತ್ತು- ಹಟ ಮಾಡಿರಲಿಲ್ಲ. ಬಹಳವಾದರೆ ಇದು ಮಾನಾಪಮಾನದ ಪ್ರಸಂಗ ಇರಬಹುದು ಎಂದು ಅವಳು ಮೆಲ್ಲನೆ ವಿಚಾರಿಸಿದಳು.

''ಏನು ಕೃಷ್ಣ, ಹೀಗೇಕೆ ಅಳುವಿ ? ಇಂದು ಹಾಗೆ ಮಾಡಬಾರದು ?''

''ಇಲ್ಲ, ಅಜ್ಜಿ ನಾನು ಅಳುವುದಿಲ್ಲ. ನೀನು ಹೇಳಿದ್ದಿ. ನನಗೆ ತಾಯಿ ಇರುವಳೆಂದು. ಇದ್ದರೆ ಅವಳೇಕೆ ಬರಬಾರದು - ನಮ್ಮನ ತಾಯಿ ಏನೋ ಹೇಳುತ್ತಿದ್ದಳಲ್ಲ...'' ನನಗೆ ಅಳು ಬಂತು.

ಅಜ್ಜಿ ನನ್ನ ಸಮಾಧಾನ ಮಾಡಲಿಲ್ಲ. ಅಪ್ಪಿಕೊಂಡು ನನಗಿಂತ ಹೆಚ್ಚಾಗಿ ತಾನೇ ಅಳತೊಡಗಿದಳು.

ಆಗ ನಾನೆ ಅಳು ನಿಲ್ಲಿಸಿ ಅಜ್ಜಿಯನ್ನು ಸಮಾಧಾನ ಮಾಡುವ ಸರದಿ ಬಂತು ! ಅಜ್ಜಿಯ ದುಃಖ ಪುಟ ನೆಗೆದು ಬರುತ್ತಿತ್ತು. ಅಂತಹದರಲ್ಲೇ ಹೇಳಿದಳು -

''ಇದ್ದಾಳೆಕೃಷ್ಣ. ನಿನಗೂ ತಾಯಿ . ಇದ್ದಾಳೆ-'' ಸಾಕು ಬದುಕಿದೆ ಎಂದೆ. ನನಗೆ ಒಳಗೊಳಗೇ ಎನ್ನಿಸುತ್ತಿತ್ತು. ನನ್ನ ತಾಯಿ ಇಂಧಲ್ಲ ನಾಳೆ ಬರುವಳು ಎನ್ನಿಸುತ್ತಿತ್ತು. ಒಮ್ಮೆಲೆ ತಂದೆಯವರು ದೇವಾಲಯ ತನಕ ಬಂದರು. ಅಜ್ಜಿ ಅವರನ್ನು ಕಂಡೊಡನೆಯೆ,

''ಕೃಷ್ಣ ತಾಯಿಯನ್ನು ನೆನೆದು ಅಳುತ್ತಾನೆ'' ಎಂದು ಹೇಳಿದಳು. ಆದರೆ ಆಗ ನಾನು ಅಳುತ್ತಿದ್ದಿಲ್ಲ. ಅಳುತ್ತಿದ್ದವಳು ಅಜ್ಜಿಯೆ. ತಂದೆಯವರು ನನ್ನ ಹತ್ತಿರ ಬಂದು ಬೆನ್ನ ಮೇಲೆ ಕೈಯಾಡಿಸಿದರು. ಅದು ನನಗೆ ತಾಯಿಯ ನೆನಪಾಗದಷ್ಟು ತಂಪಾಗಿತ್ತು. ಹಿತವಾಗಿತ್ತು. ಅವರು ಹೇಳಿದರು -

''ಮಗು ನಿನ್ನ ತಾಯಿ ನಿನ್ನನ್ನು ಹುಡುಕಿಕೊಂಡು ಬರುತ್ತಾಳೆ. ಅವಳಿಗಾಗಿ ನೀನು ಮಾಡುವುದು ತುಂಬ ಇದೆ''

''ನನ್ನ ತಾಯಿ ಬರುವಳೆ?''

''ಬರುವಳು, ಆದರೆ ನೀನು ಹೋಗದಿರು...''

''ಆಗದು, ತಂದೆ. ನನ್ನ ತಾಯಿಯ ಹತ್ತಿರ ನಾನು ಹೋಗಲೇಬೇಕು. ನೀವು ಕ್ಷಮಿಸಬೇಕು.'' ನನಗೆಲ್ಲಿ ಧೈರ್ಯವಿತ್ತೋ ಮಾತನಾಡಿದೆ. ''ನಿನ್ನ ಪ್ರಾರಬ್ಧ! ದೇವ ಬಲ ನಿನಗೆ ಬಂದರೂ ಮಾನವನ ದುರ್ಬಲತೆ ನೀಗದು-ಆಗಲಿ-ನಡೆ-'' ಎಂದವರೇ, ತಂದೆ ಹೊರಗೆ ಹೋದರು. ನನ್ನ ಮೈಯನ್ನು ಮನವನ್ನು ಬೆಳಕಿನಲ್ಲಿ ಅದ್ದಿ ತೆಗೆದ ಹಾಗಾಯಿತು. ಅಜ್ಜಿ ಕಣ್ಣು ಮುಚ್ಚಿ ಕುಳಿತವಳು ಇನ್ನೂ ದೇವಾಯತನದಲ್ಲೆ ಇದ್ದಳು.

ಸಮಾರಂಭ ಮುಕ್ತಾಯಗೊಂಡಿತ್ತು. ಆ ದಿನವೊ ಅಥವಾ ಮರು ದಿನವೊ-ಒಂದು ದಿನ ಸಂಜೆ. ಈಗ ನನ್ನ ಸ್ನೇಹಿತರಲ್ಲಿ ಹತ್ತು ಗಳಿಗೆಯ ಅವಧಿಯಲ್ಲಿ ನೂರು ವರುಷಕ್ಕೆ ಮುಂದಿನವ ಎನ್ನಿಸಿದ್ದೆ. ನನ್ನ ಪುರೋಗಮನವನ್ನು ಅವರು ಒಪ್ಪಿಕೊಂಡಿದ್ದರು. ಅಜ್ಜಿ ಹೇಳಿದಳು-



''ಸಂಜೆ ನದೀ ದಂಡೆ-ಬಂಡೆ ತಿರುಗುತ್ತ ಹೋಗಬೇಡ. ವ್ರಾತ್ಯರು, ಶೂದ್ರರು ಇರುವಲ್ಲಿ ನಿಲ್ಲಬೇಡ. ಹೊತ್ತು ಮುಳುಗುವ ಮುನ್ನ ಮನೆಗೆ ಬಂದು ಬಿಡು.''

ಅಜ್ಜಿಯ ಭಯ ವ್ಯರ್ಥ ಅನ್ನಿಸಿತು. ಏಕೆಂದರೆ ನಾನು ಇಂದು ಉಪನೀತ ವಟು. ನನಗೇತರ ಭಯ? ಎಲ್ಲ ಭಯಗಳನ್ನೂ ನಿವಾರಿಸುವ ಯಜ್ಞೋಪವೀತ ನನ್ನ ಕೊರಳಿಗಿದೆ.. ನಾನು ನನ್ನ ಸ್ನೇಹಿತರೊಡನೆ ನದೀ ತೀರಕ್ಕೆ ಹೋದೆ. ಹೊಸ ಕೌಪೀನ ನನ್ನ ಚಲನವಲನಕ್ಕೆ ತೊಡಕಾಗುತ್ತಿತ್ತು. ಯಜ್ಞೋಪವೀತವೂ ಅಷ್ಟೆ. ಆದರೆ ನನಗೆ ಯಜ್ಞೋಪವೀತದ ಬಗ್ಗೆ ಬಹಳ ಗೌರವ! ಅದು ದಾರದೆಳೆಯಾಗಿರಲಿಲ್ಲ. ನನಗೆ ಹೊಸ ಕಸುವು ತಂದು ಕೊಟ್ಟು ಅದ್ಭುತವಾಗಿತ್ತು.

ಆಟದ ಭರದಲ್ಲಿ ಹೊತ್ತು ಕಂತಿತು. ಗೆಳೆಯರು ಮನೆಗೆ ಹೋಗಲು ಅವಸರ ಮಾಡಹತ್ತಿದ್ದರು. ಆದರೆ ನನಗೆ ಮನೆಗೆ ಈಗಲೇ ಹೋಗುವುದು ಬೇಡವಾಗಿತ್ತು. ಗೆಳೆಯರಲ್ಲಿ ಯಾರೋ ಹೇಳಿದರು.

''ನನಗೆ ಹೆದರಿಕೆಯಾಗುತ್ತದೆ. ಮುಚ್ಚಂಜೆಯಲ್ಲಿ ರಾಕ್ಷಸರು, ಪಿಶಾಚಿಗಳು ಬರುತ್ತವೆ ನಾನೊಲ್ಲೆ''

ಆ ಮಾತು ನಾನು ಕೇಳಿದೊಡನೆಯೆ ಜಿಗಿದು ಮುಂದೆ ಬಂದು ''ಎಲ್ಲಿಯೋ ಎಲ್ಲಿಯ ರಾಕ್ಷಸ? ಹೇಗೆ ಬರುತ್ತಿವೆ? ಪಿಶಾಚಿ ಬಂದಾದರೂ ಬರಲಿ, ನೋಡು ಈ ಯಜ್ಞೋಪವೀತದ ಸಾಮರ್ಥ್ಯವನ್ನು.........''

ಹೆದರಿಕೆಯನ್ನು ಹೇಳಿದ ನನ್ನ ಗೆಳೆಯನಿಗೂ ಪಿಶಾಚಿಗಳನ್ನು ಓಡಿಸುವ ಸಾಮರ್ಥ್ಯ ಯಜ್ಞೋಪವೀತದಲ್ಲಿ ಇದ್ದ ಬಗ್ಗೆ ನಿಶ್ಚಯವಿತ್ತು. ಮುಂದೆ ಅವನ ಬಾಯಿ ಏಳಲಿಲ್ಲ. ಚಂದ್ರ ಮೂಡಿ ಬಂದರೂ ನಮ್ಮ ಆಟಗಳು ಇನ್ನೂ ನಡೆದಿದ್ದವು. ಅವರಲ್ಲೆ ಒಬ್ಬ ಸಮಾಧಾನ ಹೇಳಿದ.

''ಕೃಷ್ಣ ನಾಳೆ ದ್ವೀಪಾಂತರ ಹೋಗುವವ. ಇನ್ನು ಬರುವುದು ಎಂದೋ ಏನೋ ಇನ್ನೊಂದು ಗಳಿಗೆ ಆಡಿ ಹೋಗುವ''. ಗೆಳೆಯರೆಲ್ಲರೂ ನನ್ನನ್ನು ಸುತ್ತುಗಟ್ಟಿದರು. ನಿತ್ಯದ ಭಿನ್ನಾಭಿಪ್ರಾಯಗಳು ಇಂದು ಇರಲಿಲ್ಲ. ಅವರೆಲ್ಲ ದೂರದ ವೇದನೆಯೊಂದರಿಂದ ಖಿನ್ನರಾಗಲಿದ್ದಾರೆಂಬುದು ಅವರ ಮಾತು, ಧ್ವನಿಗಳಲ್ಲಿ ಸ್ಪಷ್ಟ ತಿಳಿಯುತ್ತಿತ್ತು.

ನಾನು ಗೆಳೆಯರ ನಟ್ಟ ನಡುವಿದ್ದೆ. ನಮ್ಮ ಮಾತು ಕತೆಗಳು ಬಣ್ಣಗೊಂಡು ನಡೆದಿದ್ದವು. ಚಂದ್ರ ಮೆಲ್ಲನೆ ಮುಗಿಲ ಹಾದಿಯಿಂದ ಸಾಗಿದ್ದ. ಒಂದೆರಡು ಚಿಕ್ಕೆ ಚಕ ಚಕನೆ ಹೊಳೆಯುತ್ತ ರಾತ್ರಿಯಾಗ ಹತ್ತಿದೆ ಎಂದು ಮೆಲ್ಲನೆ ಹೇಳುತ್ತಿದ್ದವು. ನಮ್ಮ ಮಂಡಳಿಯಲ್ಲಿ ಒಬ್ಬ ಕೂಗಿ ಹೇಳಿದ.

''ಅದೋ ನೋಡಿರಿ ಅಲ್ಲಿ ನಾವೆ ಬಂತು!''

ನಾವೆಲ್ಲ ಆಚೆಯ ಕಡೆಗೆ ಹೋಗಲು ಎದ್ದೆವು. ಕುತ್ಸನಿಗೆ ಹೋಗುವುದು ಬೇಡವಾಗಿತ್ತು.

ಅದೇನು ನಾವೆಯೋ, ಪುಟ್ಟ ದೋಣಿ ಕಾಣುವದಿಲ್ಲವೆ? ನಾವು ಹೋಗಬಾರದೆಂದು ತಡೆದ. ಕುತ್ಸ ತನ್ನ ತಂದೆಯ ಜತೆ ಒಂದೆರಡು ಸಲ ನಾವೆಯಲ್ಲಿ, ಹತ್ತಾರು ಸಲ ದೋಣಿಯಲ್ಲಿ ಕುಳಿತು ದ್ವೀಪದ ಆಚೆಗೆ ಹೋಗಿ ಬಂದಿದ್ದ. ಅವನಿಗೆ ದೋಣಿ ಅಂದರೆ ಅಷ್ಟು ಅಸಡ್ಡೆ. ನಮಗೋ ದೋಣಿಯೂ ಹೊಸತು. ನಾವೆಯನ್ನಂತೂ ಒಮ್ಮೆಯೋ ಎರಡು ಸಲವೊ ನೋಡಿದ್ದೆವು. ಒಬ್ಬ ಹುಡುಗ ಕುತ್ಸನ ವಿಚಾರ ತಿಳಿದು ಹೇಳಿಯೆ ಬಿಟ್ಟ.

''ನೀನು ಬಿಟ್ಟರೆ ಬಿಡು. ನಾವು ಹೋಗುತ್ತೇವೆ'' ಎಂದವನೆ ಎದ್ದು ದೋಣಿ ನಿಂತತ್ತ ಸಾಗಿದ. ಅವನ ಬೆನ್ನ ಹಿಂದೆ ನಾವು ಬಸವನ ಹಿಂದೆ ಬಾಲವಾಗಿ ಹೊರಟೆವು. ಕುತ್ಸ ಸ್ವಲ್ಪ ಬಿಗಿ ಹಿಡಿದು ಬರಬಾರದೆಂದು ಹವಣಿಸಿದ. ಕೊನೆಗೆ ಬರಲೇಬೇಕಾಯಿತು.

ದೋಣಿ ನಿಂತ ಜಾಗೆಗೆ ಹೋಗಿ ನೋಡುತ್ತೇವೆ! ಒಬ್ಬ ಹೆಂಗಸು ದೋಣಿ ನಡೆಸುತ್ತ ಬಂದಿದ್ದಾಳೆ. ನಮ್ಮ ಮಂಡಲಿಯೊಳಗಿನವನೊಬ್ಬ ನನ್ನ ಕಿವಿಯಲ್ಲಿ ಪಿಸು ಮಾತಿನಲ್ಲಿ ಹೇಳಿದ.

''ಕೃಷ್ಣ, ನಾವು ಹೊರಡೋಣ. ನೋಡು ಆಕೆ ಯಕ್ಷಿಣಿ'' ನಾನೂ ಕಣ್ಣರಳಿಸಿ ಅವಳ ಕಡೆಗೆ ನೋಡಿದೆ. ಗೆಳೆಯ ಹೇಳಿದ್ದು ಉಚಿತ ಎನ್ನಿಸಿತು. ನನಗೂ ನನ್ನವೇ ಆದ ತರ್ಕ ಅನುಮಾನಗಳಿದ್ದವು. ದೋಣಿ ತೆಗೆದುಕೊಂಡು ಹೆಂಗಸೇಕೆ ಕತ್ತಲಲ್ಲಿ ಬರಬೇಕು? ಅದೂ

ಅವಳ ಬಟ್ಟೆ, ಮೈ ಮೇಲೆ ತೊಟ್ಟ ಆಭರಣ ಎಲ್ಲ ನೋಡಿದರೆ ಅವಳು ಬೆಸ್ತರವಳ ಹಾಗೆ ಕಾಣುವುದಿಲ್ಲ. ನಮ್ಮ ಹೇಳಿದ. ಕೃಷ್ಣ ಎಲ್ಲೋ ಹೂವು ಅರಳಿವೆ ನೋಡು... ಎಂತಹ ಗಂಧ ಮೂಗಿಗೆ ಬರುತ್ತದೆ... ನಮಗೆಲ್ಲರಿಗೂ ಮೂಗು ದಾರ ಹಾಕಿ ಎಳೆದಂತಹ ಸುವಾಸನೆ ಬರುತ್ತಿತ್ತು. ನನ್ನ ಕಿವಿಯ ಹತ್ತಿರ ಬಾಯನ್ನಿಟ್ಟು ಗೆಳೆಯ ಹೇಳಿದ. ''ನೋಡಿದಿಯಾ ಕೃಷ್ಣ ಇದೆಲ್ಲ ಮಾಟವೇ ಇದೆ. ನಿತ್ಯ ನಾವು ಇಲ್ಲೇ ಆಡುತ್ತೇವೆ. ಬರಿ ಮೀನಿನ ವಾಸನೆಯೆ ಹೊರತು ಎಂದಾದರೂ ಗಂಧದ ಕಂಪು ಇತ್ತೇ?''

ನಾನು ತಲೆ ತುರಿಸಿಕೊಳ್ಳಹತ್ತಿದೆ. ನಮ್ಮಿಬ್ಬರ ಏಕಾಂತ ಕಂಡು ಉಳಿದವರು ನಮ್ಮ ಮೇಲೆಯೆ ಮುಗಿಬಿದ್ದು ''ಏನು-ಏನು?'' ಎಂದು ಕೇಳ ಹತ್ತಿದರು. ನಾನು ಅವನನ್ನು ಸಂತಯಿಸಿ ಹೇಳಿದೆ.

''ಯಕ್ಷಿಣಿ ಇದ್ದರೂ ಇರಲಿ. ನನ್ನ ಹತ್ತಿರ ಯಜ್ಞೋಪವೀತವಿದೆ. ನೀನು ಹೆದರಬೇಡ ಅದು ದೋಣಿ ಇಳಿದು ಬರಲಿ ನೋಡುವಾ!''

ನಾನು ಅವನನ್ನು ಸಂತೈಸಲು ಮಾತ್ರ ಇದನ್ನು ಹೇಳಿರಲಿಲ್ಲ. ನನ್ನಲ್ಲಿ ಅಂತಹ ಬಲವೇ ಬಂದಿತ್ತು. ನಾನು ಉಪನೀತನಾಗಿದ್ದರಿಂದ.

ಒಳ್ಳೆ ಉಡಿಗೆಯುಟ್ಟ ಹೆಣ್ಣು ಮಗಳು ಕಾಲಂದುಗೆಯ ''ಘಿಲ್'' ಎನಿಸುತ್ತಲೆ ದೋಣಿ ಇಳಿದು ನಮ್ಮನ್ನೇ ನೋಡುತ್ತ ನಿಂತಳು. ಆಗಂತೂ ಆತ ಕೂಗಿಯೇ ಬಿಟ್ಟ.

''ಅಯ್ಯೋ ಅವಳು ಇಳಿದೇ ಬಿಟ್ಟಳು.''

ಉಳಿದವರೂ ನನ್ನ ಹತ್ತಿರವೇ ಮುಗಿ ಬಿದ್ದರು. ಏಕೆಂದರೆ ನಾನೇ ಅವರಲ್ಲಿ ಮೊದಲಿನಿಂದಲೂ ಮುಂದಾಳು. ಇಂದಂತೂ ಉಪನಯನ ಪ್ರಶಸ್ತಿ ಬೇರೆ. ಆದರೆ ಸ್ನೇಹಿತರು ಹೆದರುವಂತೆ ಬಂದವಳು ಭಯಾನಕವಾಗಿ ಕಾಣುತ್ತಿರಲಿಲ್ಲ. ಅಲ್ಲದೆ ದ್ವೀಪದಲ್ಲಿ ಬೆಳೆದ ನಾವು ಇಷ್ಟೊಂದು ಅಲಂಕಾರ ಮಾಡಿಕೊಂಡ ಹೆಂಗಸರನ್ನು ನೋಡಿರಲೇ ಇಲ್ಲ. ಅಂತೆಯೆ ಅವಳು ನಮಗೆ ಸಾಮಾನ್ಯ ಹೆಂಗಸಿಗಿಂತ ವಿಲಕ್ಷಣಳಾಗಿ ಕಂಡಳು. ನಮ್ಮಲ್ಲಿ ಕೆಲವರು ಅವಳ ಕಡೆಗೆ ನೋಡಲೊಲ್ಲರು. ನನಗೇಕೋ ನೋಡುವಂತೆಯೆ ಆಗಬೇಕು! ನಾನು ಒಂದೆರೆಡು ಹೆಜ್ಜೆ ಮುಂದೆ ನಡೆದೆ. ಸ್ನೇಹಿತರೆಲ್ಲ ''ಬೇಡವೊ - ಯಾರೊ ಏನೊ?'' ಎಂದು ನನ್ನನ್ನು ಹಿಡಿದು ಹಿಂದೆಳೆದರು. ನನಗೆ ಅಜ್ಜಿ ಹೇಳಿದ ಮಾತುಗಳೂ ನೆನಪಿಗೆ ಬಂದವು. ''ಇಂದು ಅವರಿವರ ಕಣ್ಣಿಗೆ ಬೀಳಬಾರದು. ಇನ್ನೂ ಹಸಿ ಮೈಯವ'' ಎಂದು ವೀರಾತಾಯಿ ಕೂಡ ಹೇಳಿದ್ದರು. ಆದರೆ ಅವಳು ಗೆಳೆಯ ಹೇಳುವಂತೆ ಯಕ್ಷಿಣಿಯಾಗಿಯೆ ಕಾಣುತ್ತಿದ್ದಳು. ಅಷ್ಟು ಅಂದ-ಚೆಂದ ಅವಳದು! ನಾವೆಲ್ಲ ಬೆರಗು ಬಿಟ್ಟು ನೋಡುತ್ತಿರುವಾಗಲೆ ಅವಳು ನನ್ನನ್ನೆ ಕೈ ಮಾಡಿ ಕರೆದಳು. ಅವಳ ಕೈಯಲ್ಲಿ ಚಿನ್ನದ ಡಬ್ಬವೊಂದು ತಿಂಗಳ ಬೆಳಕಿಗೆ ಲಕಲಕ ಮಿಂಚುತ್ತಿತ್ತು.

ಗೆಳೆಯರೆಲ್ಲ ಹೆದರಿದರು. ಅವರೊಳಗಿನವನೊಬ್ಬ ಪ್ರಚಂಡ ಕೇಳಿದ ''ಯಾರು ನಾನೆ ?'' ಅವಳು ಕತ್ತು ಅಲ್ಲಾಡಿಸಿ 'ಅಲ್ಲ ಅವನು 'ಎಂದು ನನ್ನ ಕಡೆಗೆ ಬೆರಳು ಮಾಡಿ ತೋರಿಸಿದಳು. ನನಗೆ ಭಯವೇ ಇರಲಿಲ್ಲ. ನಾನು ಮುಂದುವರಿದು ಅವಳತ್ತ ಹೋಗಲು ಧಾವಿಸಿದೆ. ಗೆಳೆಯರೆಲ್ಲ ಕೈ ಹಿಡಿದು ಎಳೆದರು.

''ನೀನು ಇಲ್ಲದ ಹುಚ್ಚಾಚಾರ ಮಾಡಬೇಡ. ಇನ್ನೂ ಇಂದೇ ಉಪನಯನವಾಗಿದೆ ನೀನೇನು ಮಾಹಾ...? ಅವಳು ಯಾರೊ......''

ನಾನು ಸುಮ್ಮನಿರಲೇಬೇಕಾಯಿತು. ಅವಳಿಂದ ಇನ್ನೂ ಹಿಂದೆ ಸರಿದು ನಾವು ದೂರ ಕುಳಿತೆವು. ಪಾಪ! ಅವಳು ಮುಖ ಚಿಕ್ಕದು ಮಾಡಿದಳು. ಚಂದ್ರನ ಬೆಳಕಿನಲ್ಲಿ ಅವಳ ಕಣ್ಣ ಕುಣೆಯಲ್ಲಿ ಒಂದು ಮುತ್ತು ಥಳ ಥಳ ಹೊಳೆಯುತ್ತಿತ್ತು. ಹುಡುಗರು ನನ್ನನ್ನು ಎಬ್ಬಿಸಿದರು. ''ಏಲೋ ಹೋಗೋಣ ಮನೆಗೆ'' ಎಂದರು. ನಾನು ಮತ್ತೂ ಒಮ್ಮೆ ಅವಳ ಕಡೆ ನೋಡಿದೆ. ಅವಳು ಮತ್ತೆ ಮತ್ತೆ ನನ್ನನ್ನು ಕೈ ಮಾಡಿ ಕರೆದಳು. ಗೆಳೆಯರೆಲ್ಲ ಗಾಬರಿಯಾದರು. ಇನ್ನು ನಿಂತರೆ ಪ್ರಸಂಗ ಮೈ ಮೇಲೆ ಬರುವುದು ಎಂದು ನನ್ನನ್ನು ಎಳೆದರು. ನಾನು ಕೊನೆಯ ಸಲ ಅವಳ ಕಡೆಗೆ ನೋಡಿದೆ. ಕಣ್ಣ ತುದಿಯಲ್ಲಿ ಕುಳಿತ ಮುತ್ತು ನೀರಿಗೆ ಬಿತ್ತು.

ನಾವು ಹೊರಟು ಹತ್ತಾರು ಹೆಜ್ಜೆ ಮನೆಯ ಕಡೆಗೆ ಬಂದಿದ್ದೆವು. ದೋಣಿಯೂ ನೀರಿಗಿಳಿದು ಮುಂದೆ ಸಾಗುತ್ತಿತ್ತು. ಅದರ ಹುಟ್ಟದಿಂದ ಚಿಮ್ಮಿದ ಬೆಳ್ಳಿ ಹನಿಗಳು ಮಿನುಗುತ್ತಿದ್ದವು.

ನಾವು ಹಾದಿ ಗುಂಟ ಅವಳ ಬಗ್ಗೆಯೆ ಮಾತನಾಡುತ್ತ ಬಂದೆವು. ದೋಣಿಯನ್ನು ಬೆಸ್ತರು ನಡೆಸಬೇಕು. ಇವಳು ಬೆಸ್ತರವಳೆ? ಆಗಿದ್ದರೆ ಇಷ್ಟೆಲ್ಲ ಅಲಂಕಾರ ಹೇಗೆ...? ಅದು ಹೋಗಲಿ, ನದೀ ದಂಡೆ ಗುಂಟ ಹೂವು ಇಲ್ಲದೆ ಆ ಸುವಾಸನೆ ಬಂದುದೆಲ್ಲಿಂದ? ಒಂದಲ್ಲ, ಸಾವಿರ ಪ್ರಶ್ನೆ ಮಾಲೆಗಳು. ಒಂದಕ್ಕೂ ಉತ್ತರವಿಲ್ಲ. ನಾನು ಆ ಚರ್ಚೆಯಲ್ಲಿ ವಿಶೇಷ ಲಕ್ಷ್ಯ ಹಾಕಲಿಲ್ಲ.

ಬಾಗಿಲಲ್ಲೆ ಅಜ್ಜಿ ದಾರಿ ಕಾಯುತ್ತಿದ್ದಳು. ನಾನು ಹೊಸ್ತಿಲದಲ್ಲಿ ಕಾಲಿಡುವ ಮುನ್ನವೆ ಅವಳು ಅರ್ಕದ ಹೂವುಗಳನ್ನು ಆಚೆಗೀಚೆಗೆ ಚೆಲ್ಲಿ ನನ್ನ ಕಾಲ ಮೇಲೆ ನೀರು ಹನಿಸಿ ''ಇನ್ನು ಒಳಗೆ ಬಾ'' ಎಂದಳು.

ನಾನು ಅಜ್ಜಿಗೆ ನದಿಯ ದಂಡೆಯಲ್ಲಿ ದೋಣಿಯವಳು ಬೆಟ್ಟಿಯಾದ ಮಾತನ್ನು ಹೇಳಿದೆ. ಅಜ್ಜಿ ಕಿವಿಯರಳಿಸಿಕೊಂಡು ಕೇಳುತ್ತಲಿದ್ದಳು. ನಡುವೆ ಒಮ್ಮೆ ಹೇಳಿದಳು.

'' ಬಂದಿದ್ದಳೇ?'' ಎಂದು.

ನಾನು ಎಲ್ಲ ಕತೆಯನ್ನು ವಿಸ್ತಾರವಾಗಿ ಹೇಳಿದೆ. ಅಜ್ಜಿ ಏನೂ ಮಾತನಾಡದೆ ಎಲ್ಲವನ್ನೂ ಕೇಳಿದಳು.

'' ಅವಳೂ ಹೆಂಗಸೇ ಅಲ್ಲವೆ?''

ಎಂದಿಷ್ಟೇ ಅಂದು ಕಣ್ಣೊರಸಿಕೊಂಡಳು. ತಂದೆಯವರು ಬಂದುದರಿಂದ ನಾನು ಎದ್ದು ಹೊರಗೆ ಬಂದೆ.

ಮರು ದಿನವೆ ನಾನು ತಂದೆಯವರ ಜತೆಗೆ ನಮ್ಮ ದ್ವೀಪವನ್ನು ಬಿಟ್ಟು ಹೊರಟೆ. ಗೆಳೆಯರೆಲ್ಲರೂ ದೋಣಿಯ ವರೆಗೆ ಬೀಳ್ಕೊಡಲು ಬಂದಿದ್ದರು. ತಂದೆ ಅವರಿಗೆಲ್ಲ ಹೇಳಿದರು. ''ನೀವೂ ಬೇಗ ಉಪನೀತರಾಗಿ ಗುರುಕುಲಕ್ಕೆ ತೆರಳಿರಿ.'' ತಂದೆಯವರನ್ನು ಕಳಿಸಲು ಊರಿಗೆ ಊರೇ ಬಂದಿತ್ತು. ನಾನು ಅಜ್ಜಿಗೆ ನಮಸ್ಕರಿಸಿ, ಗೆಳೆಯರಿಗೆ ಹೋಗಿ ಬರುವೆ ಎಂದು ಹೇಳಿದೆ. ಜನರೆಲ್ಲ ತಂದೆಯವರಿಗೆ ನಮಸ್ಕರಿಸಿದರು. ಅವರೇ ಮೊದಲು ದೋಣಿ ಏರಿ ಕುಳಿತರು. ಅಜ್ಜಿ ನನ್ನನ್ನು ಬಿಡಲೊಲ್ಲಳು. ಅಪ್ಪಿ ಕೊನೆಗೊಮ್ಮೆ ಅವಳ ಬಂಧನದಿಂದ ಬಿಡಿಸಿ ಕೊಂಡೆ. ತಂದೆ ತಮ್ಮ ಕೈಯನ್ನು ಚಾಚಿ ದೋಣಿಯಲ್ಲಿ ಕರೆದುಕೊಂಡರು.

ದೋಣಿ ಸಾಗಿತು!

ಎಲ್ಲಿಗೆ ನನಗೆ ಗೊತ್ತಿಲ್ಲ... ಉತ್ತರಕ್ಕೆ. ನಾನು ಊರಿಗೆ, ಜನಕ್ಕೆ, ಗೆಳೆಯರಿಗೆ, ಅಜ್ಜಿಗೆ ಕೈ ಮುಗಿದೆ. ಉತ್ತರಕ್ಕೆ, ಉತ್ತರೋತ್ತರಕ್ಕೆ... ತಂದೆಯೊಡನೆ ಪ್ರಯಾಣ ಹೊರಟೆ!

27393

# ಜನ್ಮ ಜನ್ಮಗಳ ಭಾಗ್ಯ

ಗುರುಕುಲಕ್ಕೆ ಬಂದು ಏಳು ಮಳೆಗಾಲ ಕಳೆದವು. ಈ ಅವಧಿಯಲ್ಲಿ ಯಾವ ಮಹತ್ವದ ಘಟನೆಗಳೂ ಜರುಗಲಿಲ್ಲ. ಒಂದು ಅರ್ಥದಲ್ಲಿ ಗಳಿಗೆಗಳಿಗೆಯೂ ಮಹತ್ವದ್ದೇ ಆಗಿತ್ತು. ಯಾವ ಘಟನೆಯೂ ನಾನು ಮರೆಯುವಷ್ಟು ಚಿಕ್ಕದಾಗಿರಲಿಲ್ಲ.

ನಾನು ಗುರುಕುಲಕ್ಕೆ ಕಾಲಿಟ್ಟ ಮೊದಲನೆಯ ದಿನ ತಂದೆಯವರು ನಮ್ಮ ಕುಲಪತಿಗಳಾದ ಬದರರನ್ನು ಕಂಡು ನನ್ನನ್ನು ಒಪ್ಪಿಸಿ '' ಇವನು ನಿಮಗೆ ಯೋಗ್ಯನಾಗಲಿ'' ಎಂದರು. ನಾನು ಗುರುಕುಲದ ವಾತಾವರಣಕ್ಕೆ ಹೊಂದಲು ತಡವಾಗಲಿಲ್ಲ. ಆಟ ಪಾಟದಲ್ಲಿ, ಓದಿನಲ್ಲಿ, ಮಾತಿನಲ್ಲಿ ಎಲ್ಲದರಲ್ಲಿಯೂ ಯಾರಿಗೂ ಹಿಂದೆನ್ನಿಸಲಿಲ್ಲ. ಗುರು ಸೇವೆಯಲ್ಲಿ ನಾನೇ ಮೊದಲ ಪಂಕ್ತಿಯವ. ಮಳೆಯಿರಲಿ, ಚಳಿಯಿರಲಿ ದರ್ಭೆ ತರಲು, ಸಮಿಧೆ ಕಲೆ ಹಾಕಲು, ಹೂವು ಕೊಯ್ಯಲು ಹೋಗುವವನೆ. ಆಚಾರ್‍ಯರು ನನ್ನ ಮೇಲೆ ತುಂಬ ಅನುಗ್ರಹ ಮಾಡುತ್ತಿದ್ದರು. ಆಚ್ಯಾರ್‍ಯಾನಿಯ ಅಂತಃಕರಣ ಎಲ್ಲ ವಟುಗಳನ್ನೂ ಒಂದೆ ವಿಧದಿಂದ ಕಾಯುತ್ತಿತ್ತು.

ಇತ್ತೀಚೆಗೆ ನನಗೆ ತಿಳಿವಳಿಕೆ ಹೊಸತಾಗಿ ಬಂದುದು ಎನ್ನಿಸದೆ, ಜ್ಞಾಪಕದಂತೆ ಅನ್ನಿಸ ಹತ್ತಿತ್ತು. ವೇದ ಸೂಕ್ತಗಳಲ್ಲಿ ನನಗೆ ತುಂಬ ಶ್ರದ್ಧೆ. ಯಾಗಾಂಗಗಳಲ್ಲಿ ಅಮಿತವಾದ ಆಸಕ್ತಿ. ಗುರುಕುಲದಲ್ಲಿ ನಾನು ಇಷ್ಟು ಸಾಗರ ಬಿದ್ದು ಮುಂದುವರಿಯುತ್ತಿದ್ದರೂ ಎಲ್ಲರ ಆದರ ಪ್ರೀತಿಗಳು ನನ್ನ ಮೇಲೆ. ನನಗಿಂತ ಹಿರಿಯ ವಿದ್ಯಾರ್ಥಿಗಳು ನನ್ನ ಬಗ್ಗೆ ಬಹಳ ಮೆಚ್ಚುಗೆ ತೋರುತ್ತಿದ್ದರು.

ದ್ವೀಪದಲ್ಲಿ ಬರಿ ಕೃಷ್ಣನಾಗಿದ್ದ ನಾನು ಇಲ್ಲಿ ಬದರಾಶ್ರಮದಲ್ಲಿ- ಗುರುಕುಲದಲ್ಲಿ- ಕೃಷ್ಣದ್ವೈಪಾಯನ ಎಂದು ಪರಿಚಿತನಾದೆ. ಗೆಳೆಯರೆಲ್ಲ ಬರಿ ದ್ವೈಪಾಯನ ಎಂದೂ ಕರೆಯುತ್ತಾರೆ. ಆದರೆ ಆಚಾರ್‍ಯ ಬದರರು ಮಾತ್ರ ಯಾವಾಗಲೂ ಕೃಷ್ಣದ್ವೈಪಾಯನ ಎಂದೇ ಕೂಗುತ್ತಾರೆ.

ಆಗ ಶಾರದೋತ್ಸವವಿತ್ತು. ನಾನು ಬಂದ ಬಳಿಕ ಈಗ ನಡೆಯುವುದು ಎಂಟನೆಯ ಶಾರದೋತ್ಸವ. ಪ್ರತಿ ಶರತ್ಕಾಲದಲ್ಲಿಯೂ ಕುಲಪತಿಗಳಾದ ಆಚಾರ್‍ಯರು ತಮ್ಮ ಗುರುಕುಲದ

ವಿದ್ಯಾರ್ಥಿಗಳಿಗೆ ಪುರಸ್ಕಾರವಿತ್ತು, ಹೊಸ ವಿಭಾಗದ ಪ್ರವೇಶಗಳನ್ನು ನಿರ್ಣಯಿಸುತ್ತಿದ್ದರು. ಆ ದಿನ ದೂರದ ಮಹರ್ಷಿಗಳನ್ನು, ಕುಲಪತಿಗಳನ್ನು, ಸಮಾರಂಭಕ್ಕೆ ಆಮಂತ್ರಿಸಿ ಗುರುಗಳು ಅವರಿಂದ ಅಂತೇವಾಸಿಗಳಿಗೆ ಆಶೀರ್ವಾದ, ಪ್ರಶಸ್ತಿಗಳನ್ನು ದಯಪಾಲಿಸುತ್ತಿದ್ದರು. ಈಗ ಎರಡು ಉತ್ಸವಗಳ ಹಿಂದೆ ನನ್ನ ತಂದೆಯವರೇ ಅತಿಥಿಗಳಾಗಿ ಬಂದಿದ್ದರು.

ಗುರುಕುಲಕ್ಕೆ ಬಂದು ಎರಡು ಚಳಿಗಾಲ ಕಳೆದ ಬಳಿಕ ನನ್ನ ಪೂಜ್ಯ ತಂದೆಯವರ ಹೆಸರು ನನಗೆ ಗೊತ್ತಾಯಿತು. ಇಲ್ಲಿ ಈ ಆಶ್ರಮದಲ್ಲಿ, ಗುರುಕುಲದಲ್ಲಿ ಅವರ ಹೆಸರು ಕುಲಪತಿಗಳಿಗೂ ಪೂಜ್ಯ. ನನ್ನ ತಂದೆ ಈ ಆಶ್ರಮದ ಅಭಿಮಾನಿಗಳು. ಆಶ್ರಮ ತಂದೆಯವರನ್ನು ಪರಮ ಗುರು ಎಂದು ಮನ್ನಿಸುತ್ತದೆ. ಆದರೆ ನಾನಿಲ್ಲಿ ಮನ್ನಣೆ ಪಡೆದ ತಂದೆಯ ಮಗ ಎಂದು ಬೆಳೆಯಲಿಲ್ಲ. ನನ್ನ ಸ್ವಾಭಿಮಾನಕ್ಕೆ, ಗೌರವಕ್ಕೆ ಅದು ಎಂದಿಗೂ ಒಪ್ಪಲಿಲ್ಲ. ತಂದೆ ನನಗೆ ಗುರುಗಳ ಗುರುಗಳಾದರೂ ನನಗೆ ಗುರುಗಳು ಪೂಜ್ಯರು, ವರೇಣ್ಯರು! ನಾನು ನನ್ನ ಬುದ್ಧಿಯಿಂದ, ಶ್ರದ್ಧೆಯಿಂದ ಆಶ್ರಮದ ಆದರ ಸಂಪಾದಿಸಿದೆ. ನನ್ನ ಪರಿಶ್ರಮದ ಮೂಲಕ ಗೆಳೆಯರ ಮೆಚ್ಚುಗೆ ಪಡೆದೆ.

ನನ್ನ ಬಗೆಗೆ ನನಗೆ ತುಂಬ ಅಭಿಮಾನವಿದೆ. ನನ್ನ ತಪ್ಪುಗಳಿಗಾಗಿ ನಾನು ನಿರ್ದಯದಿಂದ ನನ್ನನ್ನು ದಂಡಿಸಿ ಕೊಳ್ಳುತ್ತೇನೆ. ತಪ್ಪುಗಳನ್ನು ಮಾಡಿ ದಂಡನೆ ಮಾಡಿಕೊಳ್ಳುವ ಸ್ವಭಾವ ನನಗೆ ಅಷ್ಟು ಸೇರುವುದಿಲ್ಲ. ಮಾಡುವಾಗಲೆ ನಾನು ಮೈ ತುಂಬ ಕಣ್ಣಿಟ್ಟು ಮಾಡುತ್ತೇನೆ.

ಇದು ಎಂಟನೆಯ ಶಾರದೋತ್ಸವ ನಾನು ಬಂದ ಬಳಿಕ. ಈ ಸಲದ ಅತಿಥಿಗಳು ನಾರದರು. ನಾನು ನಾರದರ ಬಗ್ಗೆ ಹಲವು ಸಂಗತಿ ಕೇಳಿದ್ದೆ. ಅವರ ಅಲೌಕಿಕ ಶಕ್ತಿಯನ್ನು ಗುರುಗಳು ಆಗಾಗ ಹೇಳುತ್ತಿದ್ದರು. ನಮ್ಮ ಲೋಕದಿಂದ ಕೈಲಾಸ -ವೈಕುಂಠಗಳಿಗೆ ಪ್ರವಾಸ ಮಾಡಿ ಬಂದವರಲ್ಲಿ ನಾರದರೆ ಮೊದಲಿಗರೆಂದು ಗುರುಗಳು ಹೇಳಿದ್ದರು. ನಾರದರು ಆ ಲೋಕಗಳಿಗೆ ಹೋಗಿ ಬಂದ ಬಳಿಕ ಅವರು ಇಲ್ಲಿನ ಅನೇಕರನ್ನು ಅಲ್ಲಿಗೆ ಕರೆದೊಯ್ದರು. ಅಲ್ಲದೆ ಅಲ್ಲಿಯ ಅನೇಕ ದೇವತೆಗಳನ್ನು ನಮ್ಮ ಲೋಕಕ್ಕೆ ಕರೆದು ತಂದರು. ಈ ಲೋಕದ ರಕ್ಷಣೆಯ ಭಾರ ಹೊತ್ತ ದೇವನನ್ನು ನಾರದರು ಆರು ಸಲ ಭೂಮಿಗೆ ಕರೆದು ತಂದು ಇದರ ಅವ್ಯವಸ್ಥೆಯನ್ನು ನಿವಾರಿಸಿದ್ದರು.

ಇತ್ತೀಚೆಗೆ ನಾರದರು ಭೂಮಿಗೆ ಸ್ವರ್ಗದ ಸಮಾನ ಸ್ಥಾನ ಮಾನಗಳು ದೊರೆಯಬೇಕೆಂದು ಭೂಮಿಯ ಬೇಡಿಕೆಯನ್ನು ಲೋಕಾಂತರದ ರಾಜ್ಯ ವ್ಯವಸ್ಥೆಗೆ ಸರಿಯಾಗಿ ಮನವರಿಕೆ ಮಾಡಿಸಲು ಶಾಶ್ವತ ಪ್ರತಿನಿಧಿಯಾಗಿ ಅಲ್ಲಿಯೆ ಇರುತ್ತಿದ್ದರು. ಆಗಾಗ ಭೂಮಿಗೆ ಬಂದು ಹೋಣೆಗಾರರಾದ ಋಷಿ ಮುನಿಗಳನ್ನು, ರಾಜ, ಚಕ್ರವರ್ತಿ, ಸಾಮ್ರಾಟರನ್ನು ಕಂಡು ಅವರ ಆಶಯಗಳನ್ನು ತಿಳಿದು ಹೋಗುತ್ತಿದ್ದರು. ನಾನು ಇಂದಿನವರೆಗೆ ಅವರನ್ನು ಕೇಳಿದ್ದೆ ಅಷ್ಟೆ ಒಮ್ಮೆಯೂ ನೋಡಿರಲಿಲ್ಲ.

ನಮ್ಮ ಗುರುಕುಲದಲ್ಲಿ ಹೊರಗಿನಿಂದ ಬಂದ ಯೋಗಪಿದರು, ನಾರದರ ಬಗ್ಗೆ ಹಲವು ಕುತೂಹಲಕಾರಿ ಸಂಗತಿಗಳನ್ನು ಹೇಳುತ್ತಿದ್ದರು. ಅವರ ಪ್ರಚಂಡ ಪ್ರಜ್ಞೆಯನ್ನು ಹೊಗಳುತ್ತಿದ್ದರು. ಆಶ್ರಮದ ಯೋಗಾಧ್ಯಾಪಕರೂ ನಾರದಯೋಗ ಕುರಿತು ಹಲ ಪ್ರಸ್ತಗಳನ್ನು ಹೇಳುತ್ತಿದ್ದರು. ಕಳೆದ ವರುಷ ನಮ್ಮ ಗುರುಕುಲದಲ್ಲಿ ನಡೆದ ಯೋಗ ಸಮ್ಮೇಲನಕ್ಕೆ ನಾರದರು ಬರುವವರಿದ್ದರು. ಆದರೆ ಅವರಿಗೆ ಕೈಲಾಸದಲ್ಲಿ ಮಹತ್ವದ ಕೆಲಸವಿದ್ದುದರಿಂದ ಅಲ್ಲಿಗೆ ಹೋಗಿದ್ದರಿಂದ ಬರಲಿಲ್ಲ.

ಗುರುಕುಲದಿಂದ ಕೆಲ ವಿದ್ಯಾರ್ಥಿಗಳು ತಮ್ಮ ಅಭ್ಯಾಸ ಮುಗಿಸಿ ತೆರಳಬೇಕಿತ್ತು. ಇನ್ನು ಕೆಲವರಿಗೆ ಹೊಸ ವರ್ಗಗಳಿಗೆ ಹೋಗಬೇಕಿತ್ತು. ಅಲ್ಲದೆ ಹೊಸ ವಿದ್ಯಾರ್ಥಿಗಳಿಗೆ ಪ್ರವೇಶವೂ ಆಗಬೇಕಿತ್ತು. ನನ್ನ ಮಟ್ಟಿಗೆ ನಾನು ವೇದ-ವೇದಾಂಗದಿಂದ ಈಗ ಯೋಗ ವಿಭಾಗಕ್ಕೆ ಹೋಗಬೇಕೆಂದು ಬಯಸಿದ್ದೆ. ಕುಲಪತಿಗಳ ಅನುಮತಿಯೂ ದೊರೆತಿತ್ತು.

ಈ ಸಲದ ಸ್ನಾತಕವಿದ್ಯಾರ್ಥಿಗಳಲ್ಲಿ ಕವಷ, ಸುಶಿರರು ಗುರುಕುಲಗಳಲ್ಲಿ ಖ್ಯಾತಿ ಪಡೆದವರಲ್ಲಿ ಪ್ರಚಂಡರು. ಸುಶಿರ ಮಹಾವಾಗ್ಮಿ! ಅಲ್ಲದೆ ರಸಾಯನಸಿದ್ಧ. ಕವಷ ಮಂತ್ರವಿದ, ವೇದಾಂಗ ಪಾರಗ! ಕುಲಪತಿಗಳಿಗೆ ಅತ್ಯಂತ ಮೆಚ್ಚಿನ ವಿದ್ಯಾರ್ಥಿನಿ ಮೇಧಾ. ಮನೀಷಿಣಿಯಾದ ಅವಳ ಮೇಲೆ ಕುಲಪತಿಗಳ ಮಮತೆ ಬಹಳ. ಯೋಗ ವಿದ್ಯೆಯಲ್ಲಿ ಅವಳಿಗೆ ಈ ಸಲ ಪದವಿ! ಆದರೆ ಅವಳು ಗುರುಕುಲದಲ್ಲಿಯೆ ನಿರುಕ್ತಾಧ್ಯಾಪಿಕೆ ಎಂದು ಈಗಾಗಲೆ ನಿರ್ವಚನವಾಗಿತ್ತು.

ಎರಡು ದಿನಗಳಿಂದಲೂ ಗುರುಕುಲದ ವಿದ್ಯಾರ್ಥಿಗಳೆಲ್ಲ ಮಂಟಪ ರಚನೆಯ ಕಾರ್ಯದಲ್ಲಿ ತೊಡಗಿದ್ದಾರೆ. ಅಭಯಾಚಾರ್ಯರು ಕಲಾ ವಿಭಾಗದ ಪ್ರಮುಖರು. ಅವರ ಆದೇಶದ ಮೇರೆಗೆ ಆಶ್ರಮದ ಮುಂದಿನ ಅಶ್ವತ್ಥವನದಲ್ಲಿ ಮಂಟಪ ನಿರ್ಮಾಣವಾಗ ಹತ್ತಿದೆ. ಅತಿಥಿ ಶಾಲೆಯ ವ್ಯವಸ್ಥೆ ಮೇಧಾ ಹಾಗು ಅವಳ ಸಖಿಯರದು. ನಾನು ಕುಲಪತಿಗಳ ಕಾರ್ಯದರ್ಶಿಯಾಗಿದ್ದೆ. ಗುರುಕುಲದಲ್ಲಿ ಹೊಸ ವಿಭಾಗ ತೆರೆಯುವುದು,.ಹಾಗು ಈಗಾಗಲೆ ಕೆಲಸ ಮಾಡುವ ವಿಭಾಗಗಳ ಅಭಿವೃದ್ಧಿ ಕುರಿತು ಕುಲಪತಿಗಳ ಆದೇಶದಂತೆ ನಿವೇದನೆ ಸಿದ್ಧಪಡಿಸಬೇಕಿತ್ತು.

ಬರೆಹ ನನಗೆ ತುಂಬ ಪ್ರೀತಿಯ ವಿಷಯ. ಶೈಲಿ ನನ್ನ ಬದು ಕಿನಷ್ಟೆ ನಿರಾಡಂಬರವೆಂದು ನಾನು ತಿಳಿದಿದ್ದೆ. ಗುರುಗಳ ಕೆಲಸವನ್ನು ಸಾಕಷ್ಟು ಪ್ರಜ್ಞೆಯಿಂದಲೆ ನಿರ್ವಹಿಸುತ್ತಿದ್ದೆ.

ನಾರದರು ಆಗಮಿಸಿದರು. ಸಭೆ ಸಮಾರಂಭಗಳಿಗೆಲ್ಲ ಅದ್ಭುತ ಸಿದ್ಧತೆಯಾಗಿತ್ತು. ಅತಿಥಿ ಶಾಲೆಯ ಕಾರ್ಯ ನಿರ್ವಹಣೆಯಲ್ಲಿದ್ದ ಮೇಧಾ ಒಮ್ಮೆ ನನ್ನನ್ನು ಕಂಡಳು. ''ಅತಿಥಿಗಳ ಜತೆಗೆ ಯಾರೋ ಮಹಿಳೆ ಬಂದಿದ್ದಾಳೆ'' ಎಂದು ಹೇಳಿದಳು. ಅವಳ ಜತೆ ಇದ್ದ ಸ್ಮೃತಿ-

'' ಅವಳು ದೇವಲೋಕದ ಮಹಿಳೆ-ಎಂದು ಯಾರೋ ಅಂದರು'' ಎಂದಳು. ನನಗೆ ಕೈ ತುಂಬ ಕೆಲಸವಿತ್ತು. ಅವರಿಗೂ ಅಷ್ಟೆ. ಆದ್ದರಿಂದ ನಾವು ಆ ಬಗ್ಗೆ ವಿವರವಾಗಿ ಮಾತನಾಡುವ ಸ್ಥಿತಿಯಲ್ಲಿರಲಿಲ್ಲ. ನಮ್ಮ, ನಮ್ಮ ಕೆಲಸಗಳಿಗೆ ಹೊರಟು ಹೋದೆವು. ಸಮಾರಂಭದ ಉಚ್ಚಾಸನದಲ್ಲಿ ಕುಳಿತ ನಾರದರ ಬದಿಗೆ ಇದ್ದ ಮಹಿಳೆಯನ್ನು ನೋಡಿದೆ. ಅವಳು ನಿಜಕ್ಕೂ ಸ್ಮೃತಿ ಹೇಳಿದ ಹಾಗೆ ದೇವಲೋಕದ ಮಹಿಳೆ ಇರಬೇಕು! ತರ್ಕ ಓದಿದ ನನ್ನ ಮನ ಅದನ್ನು ಒಪ್ಪಲಿಲ್ಲ. ನಾನು ದೇವಲೋಕದ ಮಹಿಳೆಯನ್ನು ನೋಡಿರಲಿಲ್ಲ. ಅದೇ ತರ್ಕದ ನೆರವಿನಿಂದ ನಾನು- ಅನುಮಾನ ಮಾಡಿದೆ. ಇದ್ದರೂ ಇರಬಹುದು ಎನ್ನಿಸಿತು. ಕಾರ್ಯಕಲಾಪಗಳ ಗೊಂದಲದಲ್ಲಿ ನಾನು ಆ ಕಡೆಗೆ ಗಮನ ಕೊಡಲಿಲ್ಲ.

ನಾನು ಕುಲಪತಿಗಳ ಕಾರ್ಯದರ್ಶಿಯಾದರೂ ಆ ಸಮಯದಲ್ಲಿ ನನಗೆ ಬೇರೆ ಕೆಲಸಗಳಲ್ಲಿ ನಿಯುಕ್ತಿಯಾದ್ದರಿಂದ ಸಭೆಯಲ್ಲಿ ಉಪಸ್ಥಿತನಿರಲಿಲ್ಲ. ನಾರದರ ಭಾಷಣ ತುಂಬ ಮನೋಜ್ಞವಾಗಿತ್ತು ಎಂದು ಮೇಧಾ ಹೇಳಿದಳು. ನಾನು ಬರೆದ ''ವೇದ ವ್ಯವಸ್ಥೆ'' ಎಂಬ ಗ್ರಂಥವನ್ನು ನಾರದರು ಬಹಳ ಮೆಚ್ಚಿ ಹೊಗಳಿದರಂತೆ.

ಅವರು: '' ಕೃಷ್ಣ ದ್ವೈಪಾಯನನಂಥವರಿಂದ ಗುರುಕುಲಕ್ಕೆ ಅಂತರಲೋಕದ ಮಹತ್ವ ಬಂದರೆ ಆಶ್ಚರ್ಯವಲ್ಲ'' ಎಂದರಂತೆ. ಕವಷನಿಗೆ ಗುರುಕುಲದ ವಿಶೇಷ ಪ್ರಶಸ್ತಿ ಸಿಕ್ಕಿತ್ತು. ಆತ ಸ್ನಾತಕನಾಗಿ ಈ ವರುಷವೆ ಮಿಥಿಲೆಗೆ ಹೋಗುವವನು.

ನಾರದರು ನನ್ನ ಬಗ್ಗೆ ತೆಗೆದ ಉದ್ಗಾರಗಳಿಂದ ನಾನು ಸಮಾರಂಭದಲ್ಲಿಯ ಜನರ ಚರ್ಚೆಯ ವಸ್ತುವಾಗಿದ್ದೆ. ಗುರುಕುಲ ವಾಸಿಗಳಿಗೆ ಇನ್ನೂ ಮೈತುಂಬ ಕೆಲಸಗಳಿದ್ದವು. ನಾನು ಅತಿಥಿ ಶಾಲೆಯಲ್ಲಿ ಮೇಧಾಳೊಂದಿಗೆ ಏನೋ ಕೆಲಸದಲ್ಲಿದ್ದೆ. ಕುಲಪತಿಗಳಿಂದ ಕರೆ ಬಂತು. ಕೈಯೊಳಗಿನ ಕೆಲಸವನ್ನು, ಅಲ್ಲಿಯೆ ಇದ್ದ ಸ್ನೇಹಿತರಿಗೆ ಒಪ್ಪಿಸಿ ಹೋದೆ.

ಆಚಾರ್ಯ ಬದರರು, ನನ್ನನ್ನು ಕರೆದುಕೊಂಡು ಅತಿಥಿ ನಿಲಯಕ್ಕೆ ಹೋದರು. ನಾರದರು ವಿಶ್ರಾಂತಿಗೆಂದು ಕೃಷ್ಣಾಜಿನದ ಮೇಲೆ ಒರಗಿದ್ದರು. ಅವರ ಜತೆಗೆ ಆಗಮಿಸಿದ ಮಹಿಳೆ ಆಶ್ರಮವಾಸಿಗಳ ಕಲಾ ಪ್ರದರ್ಶನವನ್ನು ನೋಡುತ್ತ ನಿಂತಿದ್ದರು. ಕುಲಪತಿಗಳು ಬಂದರೆಂದು ನಾರದರು ಎದ್ದು ಕುಳಿತರು. ಆಚಾರ್ಯರು ನನ್ನನ್ನು ಕರೆದು ನಾರದರಿಗೆ ಪರಿಚಯ ಮಾಡಿಕೊಡುತ್ತಲೆ ಹೇಳಿದರು.

'' ಈತನೆ ಪರಾಶರ ಪುತ್ರ ಕೃಷ್ಣದ್ವೈಪಾಯನ.''

ನಾನು ನಾರದರನ್ನು ಅಭಿನಂದಿಸುತ್ತಲೆ ನಮ್ರನಾಗಿ ಹೇಳಿದೆ.

''ನಾನು ಪರಾಶರ ಪುತ್ರ ಕೃಷ್ಣದ್ವೈಪಾಯನ ಅಭಿವಂದಿಸುತ್ತೇನೆ. ''

ನಾನು ನಮಸ್ಕರಿಸಿ ಹಿಂದೆ ಬಂದು ಕುಳಿತುಕೊಳ್ಳುತ್ತಲೆ ಆ ಮಹಿಳೆ ಮುಂದೆ ಬಂದು

ನಾರದರ ಸಮೀಪದಲ್ಲಿರುವ ಆಸನದಲ್ಲಿ ಕುಳಿತುಕೊಂಡಳು. ಹೊರಗೆ ಸ್ಮೃತಿ, ಗುರುಗಳನ್ನು ಕೂಗಿದಳು. ಗುರುಗಳು ''ಈಗ ಬಂದೆ ಕ್ಷಮಿಸಿ'' ಎಂದು ಹೊರಗೆ ಹೋದರು.

ನಾರದರು ಸ್ವಸ್ತಿ ಹೇಳಿದ ಬಳಿಕ ಶಾಂತ ಗಂಭೀರ ಮುದ್ರೆಯಲ್ಲಿ,

'' ಪಾರಾಶರ, ಇವರು ನಿನ್ನ ತಾಯಿ.''

ನನಗೆ ನೂರು ಲೋಕದ ಹರುಷ ಧುಮ್ಮಿಕ್ಕಿ ಎದೆ ಹೊಕ್ಕಿತು. ಹೆಚ್ಚಿದ ಹರುಷವನ್ನು ಮೈ ತಡೆದುಕೊಳ್ಳಲಾಗಲಿಲ್ಲ. ಆಶ್ಚರ್ಯದ ಆ ತುತ್ತ ತುದಿಯ ಕ್ಷಣದಲ್ಲಿ ನಾನೇನು ಮಾಡಿದೆನೋ ನನಗೆ ನೆನಪಿರಲಿಕ್ಕಿಲ್ಲ. ನಾನು ಎಚ್ಚರಗೊಂಡು ಸ್ತಿಮಿತಕ್ಕೆ ಬಂದಾಗ ನನ್ನ ತಾಯಿ ನನ್ನ ಭುಜಗಳನ್ನು ಹಿಡಿದು ಮೇಲೆತ್ತುತ್ತಿದ್ದಳು. ನಾನು ಅವಳ ಪಾದದಲ್ಲಿ ಹೊರಳಾಡಿರಬೇಕು! ನನ್ನ ಮೈ ಪುಲಕಗೊಂಡಿತ್ತು. ಮನಸ್ಸು ಹತ್ತು ದಿಕ್ಕಿಗೆ ದಿಕ್ಕಿಲ್ಲದಷ್ಟು ದೂರ ಹರಿದು ಅಗಲಾಗಿತ್ತು. ಜನ್ಮ ಜನ್ಮಗಳ ಭಾಗ್ಯ ಮೇಳಗೊಂಡು ಕಣ್ಣ ಮುಂದೆ ಬಂದಿತ್ತು.

ತಾಯಿ! ತಾಯಿ! ಎಂದು ಬಾಲ್ಯದಿಂದಲೂ ಹಲಬುತ್ತಿದ್ದೆ. ಆಶ್ರಮದಲ್ಲಿ ಕಂಡವರನ್ನು ತಾಯಿ ಎಂಬ ಆಶೆಯಿಂದಲೇ ನೋಡುತ್ತಿದ್ದೆ. ಎಲ್ಲರೂ ತಾಯಿಯಂತೆ ಕಂಡಿದ್ದರೂ ಯಾರೂ ಅವರಲ್ಲಿ ನನ್ನ ತಾಯಿಯಾಗಿರಲಿಲ್ಲ! ಇಂದು ನನ್ನ ತಾಯಿಯಾಗಿ ನನ್ನನ್ನು ಮುಟ್ಟಿದವಳ ಸ್ಪರ್ಶವೇ ಬೇರೆ. ಆ ದೃಷ್ಟಿಯೇ ಬೇರೆ!

ಏನು ಬೇರೆ? ಇಲ್ಲ. ನನ್ನ ಎದುರಿದ್ದವಳು ನನ್ನ ತಾಯಿ ಎಂದು ನಾನು ನಂಬಿ ದೃಢವಾಗಿ ತಿಳಿದೆ. ಇಲ್ಲ; ಆಸಕ್ತಿ ವಹಿಸಿದೆ. ಅದರ ಪ್ರತಿಕ್ರಿಯೆ ಇದು!

ಹಿಂದೆ! ಅತ್ತಿತ್ತ ಹರಿದ ಮನಸ್ಸನ್ನು ಇದಕ್ಕೂ ಬಲವಾಗಿ ಶಿಕ್ಷಿಸಿ, ನಂಬಿಸಿ, ಬಿಂಬಿಸಿ ತಾಯಿ ಎಂದು ಒಪ್ಪಿಕೊಳ್ಳಲು ಹೇಳಿದ್ದೆ. ಆದರೆ ಮನಸ್ಸಿಗೆ ಅದು ಬಲವಂತ ಮಾಘಸ್ನಾನವಾಗಿತ್ತು! ನನ್ನ ತಾಯಿಯ ಸಾನ್ನಿಧ್ಯವೇ ಬೇರೆ-ನಾನು ತಾಯಿ ಎಂದು ತಿಳಿದವರ ಸಾಮೀಪ್ಯವೇ ಬೇರೆ.

ಏನು ಇದರ ಗೂಢ? ಕ್ಷಣ ಹೊತ್ತು ದ್ವಂದ್ವದಲ್ಲಿ ತೂಗಾಡಿ ಗಾಸಿಗೊಂಡೆ. ನಾನು ತಾಯಿಯ ಮುಂದೆ ದೀನನಾಗಿ ಕುಳಿತುಕೊಂಡೆ. ಎಂದೂ ಹಸಿಯಾಗದ ನನ್ನ ಕಣ್ಣಿನಿಂದ ಆಗ ಧಾರೆಗೊಂಡ ನೀರು. ನನ್ನ ತಾಯಿ ಬಹು ಗಂಭೀರಳಾಗಿ ಕುಳಿತಿದ್ದಳು. ನಾರದರು ಯೋಗವಿದರು. ಅಲ್ಲದೆ ಇಂತಹ ದ್ವಂದ್ವದಿಂದ ಪುಟಗೊಂಡ ಚಿನ್ನ ಅದು. ಅವರು ತುಟಿಯಲ್ಲೆ ಮುಗುಳು ನಗೆಯರಳಿಸಿದ್ದನ್ನು ಅವರ ಕಡೆಗೊಮ್ಮೆ ಕಂಡ ನನ್ನ ಕಣ್ಣು ಸುಳಿದಾಗ ಕಂಡಿತು.

ಕಣ್ಣ ಹನಿ ನಿಲ್ಲಲ್ಲೊಲ್ಲದು. ಮಾತು ತೀರ ಸೋತು ಹೋಗಿದ್ದವು. ಉಸಿರಾಟ ರಭಸ ತಾಳಿತು. ತಾಯಿ ಎದ್ದು ಬಂದು ಬೆನ್ನ ಮೇಲೆ ಕೈಯಾಡಿಸಿ -

"ತಾಳಿಕೊಳ್ಳಬೇಕು-"

ಅವಳ ಮಾತು ನನ್ನ ಕಾಯ್ದು ಮೈಗೆ ಶ್ರೀಗಂಧ ತೊಡೆಯಿತು. ಅಮೃತವನ್ನೆ ಮಿಂದು ಉನ್ಮತ್ತವಾಗಿತ್ತು ನನ್ನ ಮನಸ್ಸು. ನಾನು ನಾರದರನ್ನು ಮನದೊಳಗೆ ನೂರು ಸಲ ಅಭಿವಂದಿಸಿದೆ. ಸ್ಮೃತಿ, ಅತಿಥಿನಿಲಯಕ್ಕೆ ಬಂದು ಬೆಕ್ಕಸ ಬೆರಗಾಗಿ ನನ್ನನ್ನು ನೋಡುತ್ತಾಳೆ.

"ಏನು ದ್ವೈಪಾಯನ-?"

ನನಗೆ ನನ್ನ ಚಾಪಲ್ಯವನ್ನು ಕಂಡು ಒಂದು ಕ್ಷಣ ಲಜ್ಜೆ ಎನ್ನಿಸಿತು. ಅದನ್ನೆಲ್ಲ ಒಳಗೆ ಅದುಮಿದೆ. ಆದರೆ ಭಾವನೆಗಳು ಧೀಂಕಿಡುವ ಪ್ರವಾಹಕ್ಕೆ ಹಾಕಿದ ತಡೆಯನ್ನು ಲೆಕ್ಕಿಸದೆ ಹುರಿಕೊಂಡು ನೆಗೆಯುತ್ತಿದ್ದವು. ಸ್ಮೃತಿ ಕುಶಲೆ! ನನ್ನ ಅವಸ್ಥೆ ನೋಡಿ ಹಿಂದೆ ಸರಿದಳು! ಅವಳು ನನ್ನ ತಾಯಿಯನ್ನು ಕರೆಯಲು ಬಂದಿದ್ದಳು. ಆಚಾರ್ಯಾನಿಯಿಂದ ಅವಳಿಗೆ ವಿಶೇಷ ಆಮಂತ್ರಣ ತಂದಿದ್ದಳು. ತಾಯಿ ಹೋಗುವ ಮನಸ್ಸಿಲ್ಲದಿದ್ದರೂ ಹೋದಳು.

ನಾನು ಹೋಗುವಾಗ ನನ್ನ ತಾಯಿಯ ಕಡೆಗೊಮ್ಮೆ ನೋಡಿದೆ. ಅವಳ ಮುಖ ಪ್ರದೀಪ್ತವಾಗಿತ್ತು. ಧನ್ಯತೆ ಅಲ್ಲಿ ಲಾಸ್ಯವಾಡುತ್ತಿತ್ತು. ನನಗೆ ಅದೇ ಜ್ಞಾಪಕ ಬಂತು. ಎಂಟು ಸಂವತ್ಸರಗಳ ಹಿಂದೆ-ನನ್ನ ಉಪನಯನದ ಆ ದಿನ ಯಮುನಾ ತೀರದಲ್ಲಿ ದೋಣಿಯ ಹತ್ತಿರ ಕೈಯಲ್ಲಿ ಚಿನ್ನದ ಡಬ್ಬ ಹಿಡಿದು ನಿಂತ ಅದೇ ಮುಖ! ಆದರೆ ಅಂದು ಭಯ, ಉದ್ವೇಗಗಳ ಜಂಜಡದಲ್ಲಿದ್ದ ಅವಳು ಇಂದು ಮುಕ್ತ ಆನಂದದಲ್ಲಿದ್ದಾಳೆ!

ನಿಜ. ಅದೇ ಮುಖ!

ಅಂದು ನನಗೆ ಹೋಗಬೇಕೆನ್ನಿಸಿದರೂ ಗೆಳೆಯರ ಯಕ್ಷಿಣಿಯ ಹೆದರಿಕೆ, ಅವರ ಸ್ನೇಹದ ಎಳೆತಗಳು ನನ್ನನ್ನು ತಾಯಿಯ ಹತ್ತಿರ ಸುಳಿಯ ಗೊಡಲಿಲ್ಲ. ಅಂದಿನ ಒಂದು ಕ್ಷಣದ ತಪ್ಪಿಗಾಗಿ ಎಂಟು ವರ್ಷ ನಾನು ತಬ್ಬಲಿಯಾಗಿ ಕಳೆದೆ!.

ಸ್ಮೃತಿ, ತಾಯಿಯನ್ನು ಕರೆದುಕೊಂಡು ಹೋದಳು. ಇಷ್ಟೊತ್ತಿನ ವರೆಗೆ ಅತಿಥಿ ನಿಲಯದ ಮೂಲೆಯಲ್ಲಿ ಕುಳಿತೆ! ಎದ್ದು ಹೋದಾಗ ಮತ್ತೆ ಬದುಕಿನ ಹೊಸ ಓಲೆ.

ನಾನು ನಾರದರನ್ನು ಕೇಳಿದೆ.

" ಪೂಜ್ಯರೆ, ನನ್ನ ತಾಯಿ ಯಾರು ? "

# ಬ್ರಹ್ಮಗಂಟು ಬಿಚ್ಚಿತು

ನನ್ನ ತಾಯಿಯ ಬದುಕಿನ ಪರಿಯನ್ನು ನಾರದರು ತಾವು ನೋಡಿದಂತೆ ಹೇಳಿದರು. ಅದೇ ದಿನ ಸಂಧ್ಯಾಕಾಲದಲ್ಲಿ ನಾರದರು, ತಾಯಿ ಹೊರಟುಹೋದರು. ತಾಯಿಯ ಜೀವನ ಪ್ರವಾಹದಲ್ಲಿ ನಾನು ಬಹು ದೂರದವರೆಗೆ ತೇಲಿ ಹೋದೆ. ಒಂದು ದೃಷ್ಟಿಯಿಂದ ಮನದ ಭಾರ ಹಗುರವಾಗಿತ್ತು. ಆದರೂ ಯಾವುದೋ ಒಂದು ಬಗೆಯ ವಿಷಣ್ಣತೆ ಮನವನ್ನು ವ್ಯಾಪಿಸಿತ್ತು. ನಾನು ದಿನದಂತೆ ಇಲ್ಲ ಎಂದು ನನಗೂ ಅನ್ನಿಸುತ್ತಿತ್ತು.

ಸ್ನೇಹಿತರು ''ಏನು ದ್ವೈಪಾಯನ, ಇಂದು ಒಂದು ವಿಧವಾಗಿದ್ದೀಯಾ? ಸಮಾರಂಭದಲ್ಲಿ ತುಂಬ ಓಡಾಟವಾಗಿ ದೇಹಾಲಸ್ಯ ಬಂದಿದೆಯೆ?'' ಎಂದು ಕೇಳುವರು.

''ಇಂದಿನ ಬೆಳಗಿನವರೆಗೆ ಚನ್ನಾಗಿದ್ದ, ಈಗಲೆ ಹೀಗಾಗಿದ್ದಾನೆ'' ತುಂಟ ಸ್ಮೃತಿಯ ಭಾಷ್ಯ!

ಅದರ ಮೇಲೆ ಹಲವರ ವಾರ್ತಿಕೆಗಳು.

ಕೆಲವರ ಟೀಕೆಗಳು. ನಾನು ಏಕೆ ಹೀಗೆ ಇದ್ದೇನೆ ಎಂಬುದು ನನಗೆ ಗೊತ್ತು. ಆದರೆ ನನ್ನ ಸಂಯಮ ಕಠೋರತೆ ಯಾವುವೂ ನನ್ನ ನೆರವಿಗೆ ಬಂದು ನನ್ನನ್ನು ಎಂದಿನಂತೆ ಇರಗೊಡಲಿಲ್ಲ. ನನ್ನ ಕುದಿ ಇತರರಿಗೆ ಗೊತ್ತಾಗುವಂತಿರಲಿಲ್ಲ. ಅನೇಕರಿಗೆ ರಹಸ್ಯಗಳನ್ನು ಅರಗಿಸಿಕೊಳ್ಳುವ ತ್ರಾಣವಿಲ್ಲದಿರುವುದು ನನಗೆ ಗೊತ್ತಿತ್ತು. ಅಂತೆಯೆ ನಾನು ನನ್ನ ಮನದ ತೂಗಾಟವನ್ನು ಇತರರಿಗೆ ಹೇಳಲಿಲ್ಲ. ನನ್ನ ಸ್ನೇಹಿತರೆದುರು ನಾನು ಸತ್ಯವನ್ನು ಬಚ್ಚಿಟ್ಟ ತಪ್ಪಿತಸ್ಥನೆನಿಸಲಿಲ್ಲ. ಎಲ್ಲ ವ್ಯಕ್ತಿಗಳಿಗೂ ಅವರವರ ಗಂಟಲಿನ ಯೋಗ್ಯತೆಯ ಮೇರೆಗೆ ಸತ್ಯ ಪಚನವಾಗುತ್ತದೆ. ಪೂರ್ಣ ಸತ್ಯ ಮಾನವನ ಜಠರಕ್ಕೆ ಬಹು ಭಾರವೇ ಆಗುತ್ತದೆ.

ಆ ದಿನ ರಾತ್ರಿ ಮತ್ತೆ, ನಾರದರು ಹೇಳಿದ ತಾಯಿಯ ಕತೆ ಮನದ ಗರ್ಭಗುಡಿಯಲ್ಲಿ ಪಡಿ ನುಡಿಯ ಹತ್ತಿತು. ನನ್ನ ಜೀವಿತದಲ್ಲಿ ನನಗೆ ಭಾವನೆಗಳು ಸೇರದಿದ್ದರೂ ನಾನು ಹಲವಾರು ಸಲ ತಿಳಿಯದಂತೆಯೆ ಭಾವನೆಗಳಲ್ಲಿ ಪೂರ್ತಿ ಮುಳುಗಿ ಕಸಿವಿಸಿಪಟ್ಟಿದ್ದೇನೆ.

ಅದು ಈ ಲೋಕದ ಮಾತಲ್ಲ; ಸ್ವರ್ಗ ಲೋಕದ ಸಂಗತಿ! ನಾರದರು ಸಾಮಾನ್ಯವಾಗಿ ಆಗ ಸ್ವರ್ಗದಲ್ಲಿಯೆ ಇರುತ್ತಿದ್ದರು. ಕಾರ್ಯ ಅಗತ್ಯವೆನ್ನಿಸಿದರೆ ಭೂಮಿಗೆ ಬರುತ್ತಿದ್ದರು. ನನ್ನ ತಾಯಿಗೆ ಅದೇ ಪ್ರಾಯದ ಮನಸ್ಸು; ವಯಸ್ಸು.

ಒಂದು ದಿನ ಅವಳು ನಾರದರ ಮನೆ ಮಟ್ಟ ಬಂದು ತನ್ನ ಬಗ್ಗೆ ತುಂಬ ಸಂಗತಿಗಳನ್ನು ಹೇಳಿಕೊಳ್ಳಹತ್ತಿದಳು. ನಾರದರಿಗೆ ನಮ್ಮ ತಾಯಿಯ ಅಹಂಕಾರದ ನುಡಿ ರುಚಿಸಲಿಲ್ಲ. ಅವರು ಸಾಕಷ್ಟು ಸ್ವಾಭಿಮಾನಿ, ಅಲ್ಲದೆ ಅನೇಕ ಸಾಮಾಜಿಕ ವ್ಯವಸ್ಥೆಗಳ ಹೊಣೆ ಅರಿತವರು. ತಾಯಿಯ ಗರ್ವದ ಮಾತು ಅವರಿಗೆ ಸೇರದೆ ಹೋಯಿತು. ಅಲ್ಲದೆ ಒಡಂಬಡಿಕೆ ಎನ್ನುವುದು ಗೊತ್ತೇ ಇರದ ಸ್ವಭಾವ ಅವರದು. ಕೂಡಲೆ ನನ್ನ ತಾಯಿಯ ಮೇಲೆ ದೂರು ಕೊಟ್ಟರು. ಅವಳಿಗೆ ಶಾಸ್ತಿಯಾಯಿತು.

ಆಗ ನನ್ನ ತಾಯಿಯ ಹೆಸರು ಅಚ್ಛೋದಾ ಎಂದಿತ್ತು. ಅವಳು ರೂಪ, ಗುಣಗಳಿಂದ ಸ್ವರ್ಗದ ಬಹು ಜನಕ್ಕೆ ಮೆಚ್ಚಿಗೆಯಾಗಿದ್ದಳು. ಗರ್ವವೊಂದು ಅವಳ ಎದೆಯ ಹುತ್ತದಲ್ಲಿ ಹೆಡೆಯಾಡುತ್ತಿತ್ತು. ನಾರದರು ನಮ್ಮ ತಾಯಿಯ ವಿಷಯದಲ್ಲಿ ಸಾಕಷ್ಟು ಅನುಕಂಪ ಉಳ್ಳವರಾಗಿದ್ದರು. ಸ್ವರ್ಗದಲ್ಲಿ ಇವಳಿಗೆ ಅಜೀರ್ಣವಾಗುವಷ್ಟು ಐಶ್ವರ್ಯ. ಯಾರಿಗೂ ಇಲ್ಲದ ರೂಪ, ಎಲ್ಲರನ್ನೂ ಮೋಹಿಸುವ ಮಧುರ ಕಂಠ ಇದ್ದವು.

ಇವಳು ಸ್ವರ್ಗದಲ್ಲಿ ಹೀಗೆ ಇದ್ದರೆ ಇವಳ ಕಾಲೊಳಗಿನ ದಾರಿ ಜಾರಬಹುದು ಎಂದು ನಾರದರಿಗೆ ಎನ್ನಿಸಿತು. ನಮ್ಮ ತಾಯಿಯನ್ನು ಶಿಕ್ಷಿಸುವ ನೆವದಲ್ಲಿ ಅವಳಿಗೆ ನಾರದರು ಒಳಿತನ್ನೇ ಬಯಿಸಿದರು. ಸ್ವರ್ಗದಿಂದ ತಾಯಿಯನ್ನು ಹೊರಗೆ ಕಳಿಸಲಾಯಿತು ಆದರೆ ನಮ್ಮ ತಾಯಿ ಹೆಂಗಸೇ ಅಲ್ಲವೆ? ಹಟ ಅವಳಿಗೆ ಸಹಜ. ಸ್ವರ್ಗದ ಬಾಗಿಲಲ್ಲೆ ಅವಳು ಅನ್ನ ನೀರಿಲ್ಲದೆ ಕುಳಿತಳು. ಒಂದಲ್ಲ- ಹಲವು ದಿನ. ಊರ ಬಾಗಿಲಲ್ಲಿ ಹೆಂಗಸರು ಕುಳಿತಿದ್ದಾಳೆ. ಅದೂ ಕೂಳು ನೀರು ಇಲ್ಲದೆ ನಿರಾಹಾರಿಯಾಗಿ ಎಂದರೆ ಯಾರಿಗೆ ಭೂಷಣ? ಸ್ವರ್ಗದ ಹಿರಿಯರು ಬಂದರು.

" ಏನು ಏಕೆ" ಎಲ್ಲ ಕೇಳಿದರು. ತಾಯಿ ಸ್ಪಷ್ಟಯಾಗಿ ಹೇಳಿದಳು.

" ನೀವು ನನಗೆ ನನ್ನ ತಪ್ಪಿಗೆ ಶಿಕ್ಷೆ ಕೊಟ್ಟಿದ್ದೀರಿ. ನಾನು ಅದನ್ನು ಸೆರಗಿನಲ್ಲಿ ಕಟ್ಟಿಕೊಂಡೇ ಹೊರಟಿದ್ದೇನೆ. ನಿಮ್ಮ ಆಜ್ಞೆಯನ್ನು ನಾನು ತಲೆಯಲ್ಲಿ ಹೊತ್ತು ಪಾಲಿಸುವೆ. ಆದರೆ ನಾನು ಎಲ್ಲಿಯೇ ಇರಲಿ. ನನ್ನ ಮಕ್ಕಳನ್ನು ನೀವು ಸ್ವರ್ಗದ ಸಂತಾನವೆಂದೇ ಎಣಿಸಬೇಕು. ಅವರು ಸ್ವರ್ಗಕ್ಕೆ ಬಯಸಿದಾಗ ಬರುವುದಾಗಲೀ, ಇಲ್ಲವೆ ಸ್ವರ್ಗದವರನ್ನು ಕರೆದಾಗ ನಿಲ್ಲದೆ ಹೋಗುವುದಕ್ಕಾಗಲಿ ಯಾವ ತೊಂದರೆಯೂ ಇರಬಾರದು."

" ಈ ಮಾತು ನಿನ್ನ ಹಿರಿಯ ಮಗನ ವಿಷಯದಲ್ಲಿ ಮಾತ್ರ ನಡೆಯುತ್ತದೆ." ಸ್ವರ್ಗದ ಹಿರಿಯರು ತಾಯಿಯ ಮಾತನ್ನು ಅರ್ಧ ಮನ್ನಿಸಿದರು. ತಾಯಿ ಸ್ವರ್ಗದ ಸೀಮೆ ದಾಟಿ ಭೂಮಿಗೆ ಬಂದಳು. ಅವಳ ಐಶ್ವರ್ಯ ಅಲ್ಲೆ ಉಳಿಯಿತು. ಸ್ವರ್ಗದ ಸುಖಮಯ ವಾತಾವರಣದಲ್ಲಿ ಬೆಳೆದ ಅವಳು ಭೂಮಿಗೆ ಬಂದಾಗ ಬಸವಳಿದು ಹೋಗಿದ್ದಳು. ಯಮುನಾ ತೀರದಲ್ಲಿ ಅನಾಥಳಾಗಿ ಉಪವಾಸ-ವನವಾಸ ಕಳೆಯುತ್ತ ದಂಡೆಯ ಮೇಲೆ

ಮೂರು ದಿನ ಗಟ್ಟಲೆ ಮಲಗಿದುದನ್ನು ಬೆಸ್ತರ ಗುಂಪಿನ ಹಿರಿಯ ದಾಶ ನೋಡಿದ. ಇವಳ ಹತ್ತಿರ ಬಂದು ಕೇಳಿದ-

'' ಯಾರಮ್ಮ ನೀನು? ಯಾರು, ಇಲ್ಲಿ ಹೀಗೇಕೆ ಇದ್ದೀ? ''

ನನ್ನ ತಾಯಿಗೆ ಅಳು ಬಂತು. ಹೊಟ್ಟೆಯಲ್ಲಿ ಹಸಿವು ಕುಣಿಯುತ್ತಿತ್ತು. ಇಷ್ಟು ಕೇಳಿದ ದಾಶನನ್ನು ತಂದೆ ಎಂದು ತಿಳಿಯುವಷ್ಟು ಅವಳು ದೀನಳಾಗಿದ್ದಳು.

''ಏನು ಹೇಳಲಿ ತಂದೆ! ನಾನೊಬ್ಬ ತಬ್ಬಲಿ ಹೆಣ್ಣು ಬಾಲೆ. ತಂದೆ ತಾಯಿಗಳು ಬಡತನದಿಂದ ಕಾಡಿನಲ್ಲಿ ಬಿಟ್ಟು ಹೋದರು. ಕುಂಟುತ್ತ ಕೂರುತ್ತ ಇಲ್ಲಿ ಬಂದಿದ್ದೇನೆ. ''

'' ಇಲ್ಲಿ ನಿನ್ನವರು ಯಾರೂ ಇಲ್ಲವೇನಮ್ಮ......''

''ಯಾರು ಇರಬೇಕು? ಈ ಪಾಪಿಯನ್ನು ಮಾತನಾಡಿಸಿದ ನೀನೇ ನನ್ನ ತಂದೆ.....''

'' ಇನ್ನು ಮುಂದೆ ನೀನು ಎಲ್ಲಿ ಹೋಗುವವಳು...?

''ಈ ಪಾಪಿಯನ್ನು ಯಾರು ಮುಂದೆ ಕರೆಯಬೇಕು? ತಾಯಿ ಯಮುನೆಗೆ ಕರುಣೆ ಬಂದರೆ ತನ್ನ ಸೆರಗಿನಲ್ಲಿ ನನ್ನನ್ನು ಮುಚ್ಚಿಕೊಳ್ಳುವಳು. ಅವಳಿಗೂ ನಾನು ಬೇಡವಾದರೆ ಹಾದಿಯ ಹೆಣವಾಗಿ ಹದ್ದು ಕಾಗೆಗಳಿಗೆ....''

ದಾಶನ ಕರುಳು ಕರಗಿತು. ಆದರೆ ಮಾತಾನಾಡದವನಾಗಿ ಸುಮ್ಮನೆ ಕುಳಿತಿದ್ದ. ನನ್ನ ತಾಯಿಯೂ ಮಾತಾಡಲಿಲ್ಲ. ಕೊನೆಗೆ ಆತನೇ ಕೇಳಿದನಂತೆ.

''ಮಗಳೇ ನಾವು ಬೆಸ್ತರು, ನೀನು ಯಾವ ದೊಡ್ಡ ಕುಲದವಳೊ ಗೊತ್ತಿಲ್ಲ. ನಮ್ಮ ಮನೆಗೆ ಬರುವುದಾದರೆ ನನಗೂ ಹಿಗ್ಗು. ನೋಡು ನಿನ್ನ ಮನಸ್ಸು...?''

ತಾಯಿ ಗತಿಯಿಲ್ಲದೆ ದಾಶನ ಮನೆಗೆ ಹೋಗಲು ಒಪ್ಪಿ, ಅವನನ್ನು ಅನುಸರಿಸಿದಳು. ದಾಶ ಸಾಮಾನ್ಯ ಬೆಸ್ತನಾಗಿರಲಿಲ್ಲ. ಆತ ಬೆಸ್ತರ ದೊರೆಯೆ ಏನ್ನುವಷ್ಟು ಪ್ರಚಂಡನಿದ್ದ. ದೋಣಿ ಒಯ್ದು ಬಲೆ ಹಾಕಿ ಮೀನು ಹಿಡಿಯಲು ಆತ ಹೋಗದಿದ್ದರೂ ಅವನ ಪಾಲಿಗೆ ಎಲ್ಲರಿಗಿಂತ ಹೆಚ್ಚು ಮೀನು ಬರುತ್ತಿತ್ತು. ಅವನಿಗೆ ಆ ಸಮಾಜದಲ್ಲಿ ಅಷ್ಟು ಪ್ರತಿಷ್ಠೆ

ನನ್ನ ತಾಯಿಗೆ ದಾಶನ ಮನೆ ಹಿಡಿಸಿತು. ಮೊದಲನೆಯದಾಗಿ ಬೇರೆ ಗತಿ ಇರಲಿಲ್ಲವೆಂದು. ದಾಶ ತನ್ನ ಸಮಾಜದಲ್ಲಿ ಇಷ್ಟೊಂದು ಪ್ರಭಾವಶಾಲಿ ಏನೋ ಆಗಿದ್ದ. ಮನೆಯೂ ಸಮೃದ್ಧವಾಗಿತ್ತು. ಆದರೆ ಅದರಲ್ಲಿ ಒಂದು ಬಗೆಯ ಕ್ರೂರ ಮೌನ ವ್ಯಾಪಿಸಿತ್ತು. ಇದು ದಾಶನನ್ನು ನಿತ್ಯ ತಿಪಿಯುತ್ತಿತ್ತು. ಮಕ್ಕಳಿಲ್ಲದಿರುವಿಕೆಯಷ್ಟು ಸಾಮಾಜಿಕ ಅಪಾತ್ರತೆ ಬೇರೇನು ಬೇಕು? ದಾಶ ಹೇಗಾದರೂ ತಡೆದು ಕೊಂಡಾನು. ಗಂಡಸಿಗೆ ಈ ವೇದನೆ ಅಷ್ಟು ಕಾಡಲಾರದೆಂದರೆ ದಾಶನ ಹೆಂಡತಿಯಂತೂ ನಿತ್ಯ ಈ ನೋವಿನಿಂದ ಸೊರಗಿ ಸಣ್ಣಾಗಿದ್ದಳು.

ಆದರೂ ಇದು ಅವರ ಕೈ ಮೀರಿದ ವಿಷಯವಾಗಿತ್ತು. ನನ್ನ ತಾಯಿ ಮನೆಯಲ್ಲಿ ಕಾಲಿರಿಸಿದಾಗಿನಿಂದ ದಾಶನಿಗೆ ಸಮಾಜದಲ್ಲಿ ಪ್ರತಿಷ್ಠೆ ಬೆಳೆಯಿತು. ಲಾಭ ಇಮ್ಮಡಿಸಿತು. ದಾಶನ ಹೆಂಡತಿಗೆ ಅಷ್ಟೇ ಮಾನಸಿಕ ಸಮಾಧಾನ ದೊರೆಯುತ್ತಿತ್ತು. ನಮ್ಮ ತಾಯಿಯ ಕಾಲ್ಗುಣ ಒಳ್ಳೆಯದೆಂದು ಮೊದಲಾಯಿತು.

ಇದೆಲ್ಲವೂ ಒಂದು ತೂಕವಾದರೆ ನಮ್ಮ ತಾಯಿ ಆ ಮನೆಗೆ ಹೊಂದಿಕೊಂಡು ಅವರ ಹೊಟ್ಟೆಯ ಮಗಳಿಗಿಂತ ಹೆಚ್ಚಾಗಿ ನಡೆದುಕೊಳ್ಳ ಹತ್ತಿದ್ದೇ ಒಂದು ತೂಕ! ನಿತ್ಯ ಸಂಜೆ ಮೀನಿನ ಪಾಲುಗೊಳ್ಳುವಲ್ಲಿ ಅವಳು ದಾಶನ ಹೆಂಡತಿಯ ಜತೆ ಬುಟ್ಟಿತೆಗೆದುಕೊಂಡು ಹೋಗಬೇಕು. ಮನೆಯ ನೀರು, ಅಡುಗೆ ಕೆಲಸಗಳಲ್ಲೆಲ್ಲ ನನ್ನ ತಾಯಿ ಎಂದೂ ಆಲಸ್ಯ ಮಾಡದೆ ಮೈ ಮಣಿಸುತ್ತಿದ್ದಳು. ಒಮ್ಮೆ ಬೆಸ್ತರ ಕೇರಿಯ ನಿಯಮದಂತೆ ದಾಶನಿಗೆ ಹರಗೋಲು ಹಾಯಿಸುವ ಪಾಳಿ ಬಂತು. ಊರಮುಂದಿನ ನದಿಯಲ್ಲಿ ಧರ್ಮದ ಹರಗೋಲಿತ್ತು. ವರುಷಕ್ಕೆ ಅರಮನೆಯಿಂದ ಕೊಂಚ ಯವ, ವೀಳ್ಯ ಅದರ ಪ್ರತಿಫಲವಾಗಿ ಬರಬೇಕು. ಕೇರಿಯ ಎಲ್ಲ ಬೆಸ್ತರೂ ಸರತಿಯಂತೆ ಹರಗೋಲು ಹಾಕುತ್ತಿದ್ದರು. ಅದು ಶರತ್‌ಕಾಲ. ದಾಶನ ಸರದಿ ಬಂತು. ದಾಶ ಈಗ ವಯಸ್ಸಾದವ. ಇತರರಿಗೆ ಅದನ್ನು ಒಪ್ಪಿಸಲು ಬರದಂತೆ ನಿರ್ಬಂಧವಿತ್ತು. ಒಂದು ದಿನ ಆತ ಮನೆಯಲ್ಲಿ ಇದೇ ಚಿಂತೆಯಿಂದ ತಲೆ ಹಿಡಿದು ಕುಳಿತಾಗ ನನ್ನ ತಾಯಿ ಆ ಹೊಣೆ ನಾನು ನಿರ್ವಹಿಸುವೆ ಎಂದು ಒಪ್ಪಿಕೊಂಡಳು. ದಾಶನಿಗೆ ಇದು ಮನಸ್ಸಿಲ್ಲದ ಕೆಲಸವಾಗಿತ್ತು. ಆದರೆ ಅನ್ಯ ವಿಧಿಯಿಲ್ಲ. ಕೊನೆಗೆ ನನ್ನ ತಾಯಿ ಹಟ ತೊಟ್ಟು ಅವನನ್ನು ಒಡಂಬಡಿಸಿದಳು.

ಸ್ವರ್ಗದಲ್ಲಿ ಐಶ್ವರ್ಯದಲ್ಲಿ ಓಡಾಡಿದ ತಾಯಿಗೆ ಹರಗೋಲು ನಡೆಸುವ ಅಭ್ಯಾಸ ಎಲ್ಲಿಯದಿರಬೇಕು? ಅದೂ ಚಳಿಗಾಲ. ಯಮುನೆಯೂ ಬಡವಾಗಿದ್ದಳು. ನನ್ನ ತಾಯಿ ಒಂದು ದಿನ ಕೋಲು ಹಿಡಿದುಕೊಂಡು ಹರಗೋಲು ಹತ್ತಿದಳು. ದಾಶ ಅವನ ಹೆಂಡತಿ ಅವಳನ್ನು ಕಳುಹಿಸಲು ಸಾಕಷ್ಟು ಸಂಕೋಚಪಟ್ಟುಕೊಂಡರು. ಮೂರು ವರುಷಗಳ ಕಾಲ ಮಗಳೆಂದು ಸಾಕಿದ ನನ್ನ ತಾಯಿಯನ್ನು ನಿತ್ಯವೂ ಸಂಜೆಯವರೆಗೆ ಅಗಲಿರುವುದು ಅವರಿಗೆ ಅಸಹ್ಯವಾಗಿತ್ತು.

ಆದರೂ ವಿಧಿಯಿಲ್ಲ. ಬೆಸ್ತರವಳಾದಾಗ ನನ್ನ ತಾಯಿಗೆ ಹೆಸರೇನಿತ್ತು ಎಂಬುದನ್ನು ನಾರದರು ಹೇಳಲಿಲ್ಲ. ಆದರೆ ಅವಳ ರೂಪ ತೀರ ಬೆಸ್ತರವಳಂತೆಯೆ ಆಗಿತ್ತು. ಮೈಗೆ ಅಸಹ್ಯವಾದ ಮೀನಿನ ವಾಸನೆ. ಕೇರಿಯವರೆಲ್ಲ ಇವಳಿಗೆ ಹೇಳುತ್ತಿದ್ದರು. ದಾಶನ ಮಗಳು ಬಂದರೆ ಹರದಾರಿ ಹಬ್ಬುತ್ತದೆ ಮೀನಿನ ವಾಸನೆ ಎಂದು. ಎಷ್ಟೋ ದಿನ ''ಹರದಾರಿ ವಾಸನೆ'' ಎಂಬ ವಿಡಂಬನೆಯ ಹೆಸರಿನಿಂದಲೆ ನಮ್ಮ ತಾಯಿಯನ್ನು ಕೂಗುತ್ತಿದ್ದರು.

ಒಂದು ದಿನ ಹೊತ್ತು ಮುಳುಗ ಬಂದಿತ್ತು. ತಾಯಿ ತನ್ನ ಹರಗೋಲನ್ನು ಹೊಳೆಯ ಆಚೆಯ ದಡಕ್ಕೆ ನಿಲ್ಲಿಸಿದಳು. ಅವಳಿಗೆ ಕತ್ತಲಾಗುವುದರೊಳಗಾಗಿ ತನ್ನ ಊರ ದಂಡೆಗೆ

ಹರಗೋಲು ತಲುಪಿಸಿ ಬೇಗ ಮನೆ ಸೇರಬೇಕಿತ್ತು. ಯಾರೋ ಜನ ಬರುವರೆಂದು ಹೇಳಿ ಹರಗೋಲು ನಿಲ್ಲಿಸಿಕೊಂಡು ಆಯತ್ತ ಹೊತ್ತಿನಲ್ಲಿ ಬರುವುದಿಲ್ಲವೆಂದರು. ಹಲವು ತಿಂಗಳಿಂದ ಧರ್ಮಾರ್ಥ ಹರಗೋಲು ನಡೆಸಿ ಅಭ್ಯಾಸವಿದ್ದ ತಾಯಿಗೆ ಜನರ ಸ್ವಭಾವದ ಪರಿಚಯವಿತ್ತು. ಧರ್ಮದ ಹರಗೋಲು, ನಿಲ್ಲದೆ ಏನು? ಎನ್ನುವ ಜಂಭ ಜನಕ್ಕೆ

ತಾಯಿ ಇನ್ನೂ ದಂಡೆ ಬಿಟ್ಟು ಹರಗೋಲು ನೂಕಿರಲಿಲ್ಲ. ಊರ ಕಡೆಯ ದಂಡೆಯಿಂದ ಯಾರೋ ಕೂಗಿ ಹರಗೋಲು ನೂಕಿ ತರುವಂತೆ ಹೇಳಿದರು. ಹರಿಹಾಯಿಸುವ ಕೆಲಸವನ್ನು ತಾಯಿ ಶ್ರದ್ಧೆಯಿಂದ ಮಾಡುತ್ತಿದ್ದಳು. ಆದರೂ ದುಡಿಮೆಗೆ ವಿಶ್ರಾಂತಿ ಅಗತ್ಯ. ಇರುಳು ಹಗಲು ಉಂಟು. ಆದಿನ ತೆರಪಿಲ್ಲದ ಹರಗೋಲು ಓಡಿಸಿ ತಾಯಿ ದಣಿದಿದ್ದಳು. ಈಗ ಆಚೆಯ ದಡದಲ್ಲಿ ಯಾರೋ ಕೂಗಿದ್ದರಿಂದ ಮತ್ತೆ ಬಂದು ಹೋಗುವ ಪಾಳಿ ಬಂತೆಂದು ಒಂದು ಕ್ಷಣ ಬೇಜಾರುಪಟ್ಟುಕೊಂಡಳು. ಆದರೂ ಯಾವ ಜನಕ್ಕೆ ಎಂತಹ ಅಗತ್ಯದ ಕೆಲಸವೊ ಏನೋ ಇದೊಂದುಸಲ ಹರಿಹಾಯಿಸಿದರಾಯಿತು ಎಂದುಕೊಂಡು ಅವಸರವಸರವಾಗಿ ಹರಗೋಲನ್ನು ದಂಡೆಗೆ ತಲುಪಿಸಿದಳು. ಹೊತ್ತು ಪೂರ್ತಿ ಮುಳುಗಿ ಹೋಗಿತ್ತು. ಚಿಕ್ಕೆ ಅಲ್ಲಲ್ಲಿ ಹಣಕಿಕ್ಕುತ್ತಿದ್ದವು. ಚಂದ್ರನು ತನ್ನ ಅರೆ ಮುಖ ತೆರೆದು ಮುಗಿಲಿನಲ್ಲಿ ತೇಲುತ್ತಿದ್ದ.

''ನನ್ನನ್ನು ಆಚೆಯ ದಂಡೆಗೆ ತಲುಪಿಸಬೇಕು.'' ತೇಜಸ್ವಿಯಾದ ತರುಣ ಯುವಕನೊಬ್ಬ ಕೇಳಿದ.

21393

''ಆಗಲೆ ಕತ್ತಲಾಯಿತು. ಬೇಗ ಬಂದಿದ್ದರೆ ದಾಟಿಸುತ್ತಿದ್ದೆ.'' ತಾಯಿ ಮೃದು ಮಾತಿನಲ್ಲಿ ಹೇಳಿದಳು.

''ನನಗೆ ಅತಿ ಅಗತ್ಯವಾದ ಕೆಲಸವಿದೆ. ನಾನು ಆಚೆಗೆ ಹೋಗಲೇಬೇಕು. ಹರಿಹಾಯಿಸಿದರೆ ಉಪಕಾರವಾಗುತ್ತದೆ.''

ತಾಯಿ ಆ ತೇಜಸ್ವಿಯ ಮುಖವನ್ನೊಮ್ಮೆ ನೋಡಿದಳು. ಚಂದ್ರಮನ ಮಂದಪ್ರಕಾಶದಲ್ಲಿ ಶಾಂತ ಗಂಭೀರವಾಗಿ ತೋರುವ ಆತನ ಮಾತಿಗೆ ಇಲ್ಲೆನ್ನುವುದು ಅವಳಿಂದ ಆಗಲಿಲ್ಲ. ಅವಳು ಹರಗೋಲು ಏರುವಂತೆ ಆತನಿಗೆ ಬಿನ್ನವಿಸಿದಳು.

ಯಮುನೆಯ ದಂಡೆಗೆ ಬಂದು ಜಲವನ್ನು ಸಂಪ್ರೋಕ್ಷಿಸಿಕೊಂಡು ಆತ ಹರಗೋಲು ಹತ್ತಿದ. ನಾವೆ ಹೊರಟಿತು. ಸಂಜೆಯ ಹೊತ್ತು! ತಂಗಾಳಿ. ಹರಗೋಲು ಮೆಲ್ಲನೆ ಸಾಗಿತ್ತು. ಶಾಂತವಾಗಿ ಹರಿಯುವ ಯಮುನೆ, ದಂಡೆಯಿಂದ ಮೃದುವಾಗಿ ಬೀಸುವ ಗಾಳಿ. ಹರಗೋಲು ನಡೆಸುವವಳು ಹರೆಯದ ಹೆಂಗಸು- ನಿರ್ಜನ.

ಅವರಿಬ್ಬರೂ ಮನುಷ್ಯರು: ನನ್ನ ತಾಯಿ ದೇವ ಲೋಕದ ಭೋಗಗಳನ್ನು ಭೋಗಿಸಿ ಧರೆಗೆ ಬಂದವಳು. ತನ್ನ ಬಯಕೆ ಆಶೆಗಳನ್ನು ಅದುಮಿ ದಾಶನ ಮನೆಯಲ್ಲಿ ಜೀವ ತೇಯುವವಳು.

ಆತನೋ ಅದೇ ಗುರುಕುಲದಿಂದ ಹಿಮಾಲಯದ ಅಂಚಿಗೆ ಯೋಗಸಾಧನೆಗೆ ಹೋಗಿ ಮನೆಗೆ ಮರಳಿದ ತಪಸ್ವಿ. ಆಯುಷ್ಯದ ಒಂದು ಭಾಗವನ್ನೆಲ್ಲ ಬಯಕೆಗಳನ್ನು ಹತ್ತಿಕ್ಕಿ ಓದಿನಲ್ಲೋ ತಪದಲ್ಲೋ ಕಾಲಯಾಪನೆ ಮಾಡಿದವನು.

ಏಕಾಂತದ ಈ ನಿರ್ಜನ ಎರಡೂ ಜೀವಕ್ಕೆ ಉದ್ದೀಪನವಾಗಿತ್ತು. ಒಬ್ಬರೊಬ್ಬರು ಒಪ್ಪಿಕೊಂಡರು. ಅಪ್ಪಿಕೊಂಡರು. ಅವಳು ಆ ತಪಸ್ವಿಯನ್ನು ದ್ವೀಪದ ಬಳಿ ಬಿಟ್ಟು ಮನಸ್ಸಿಲ್ಲದ ಮನಸ್ಸಿನಿಂದ ತಿರುಗಿದಳು.

''ಮತ್ತೆ ಎಂದು?''

''ನಿನಗೆ ಅಭಿಲಾಷೆಯಾದರೆ ನಾನಿರುವವರೆಗೆ ನಿತ್ಯ ಸಂಜೆ ಬಾ-''

ತಾಯಿ ಹರಗೋಲು ಹಾಯುವುದು ಮುಗಿದ ಬಳಿಕ ಅಂದಿನಿಂದ ಹಲವಾರು ದಿನ ದ್ವೀಪಕ್ಕೆ ಬಂದು ಹೋಗಬೇಕು. ತಪಸ್ವಿ ಆರು ಪೂರ್ಣಿಮೆಗಳವರೆಗೆ ಅಲ್ಲಿದ್ದರು.

ಒಂದು ದಿನ ತಾಯಿ ಸಂಜೆಗೆ ಬಂದಳು. ಅವಳ ಮುಖ ದೀನವಾಗಿತ್ತು. ಧ್ವನಿಯಲ್ಲಿ ಭಯ ಇತ್ತು. ತಾಯಿ ಹೀಗಿರುವುದನ್ನು ಕಂಡು ಆತ ಕೇಳಿದ.

''ಏಕೆ ಮೈಯಲ್ಲಿ ಚೆನ್ನಾಗಿಲ್ಲವೆ?''

''ಮನಸ್ಸಿನಲ್ಲೂ....''

''ಏನು ಯೋಚನೆ.....?''

''ನೀವೊ ಹೊಸ ಚಂದ್ರ ಉದಯಿಸಿದೊಡನೆ ಮತ್ತೆ ಹಿಮಗಿರಿಗೆ ಹೊರಡುತ್ತೀರೆಂದು ಹೇಳಿದಿರಿ. ಆದರೆ ಇಲ್ಲಿ ಬೆಳೆಯುವ ವಂಶ ಚಂದ್ರನ ಗತಿ...? ನನ್ನ ಸ್ಥಿತಿ ನೀವು ಬಲ್ಲಿರಿ!''

ತೇಜಸ್ವಿಯ ಮುಖ ಒಂದು ಮ್ಲಾನವಾಯಿತು. ಆದರೆ ಆತ ನಿರ್ಭಯನೇ ಇದ್ದ. ದೂರಗಾಮಿಯಾದ ಪರಿಣಾಮಗಳನ್ನೂ ಆತ ಬಲ್ಲ.

''ಅಂಜದಿರು. ನಾನು ದಾರಿಹೋಕನೆಂದು ಭಾವಿಸಿದ್ದೀಯಾ? ನಾನೇ ಬಂದು ದಾಶನಿಗೆ ಹೇಳುತ್ತೇನೆ ನಡೆ. ಇಲ್ಲಿ ನನ್ನ ತಾಯಿ ಇದ್ದಾಳೆ. ನೀನು ನನ್ನ ಅನುಕೂಲಪಾತ್ರಳೆಂದು ಅವಳಿಗೆ ನಾನು ಹೇಳಿದರೆ ತುಂಬ ಹಿಗ್ಗುತ್ತಾಳೆ....''

ತಾಯಿಗೆ ಹಲವಾರು ಯೋಚನೆಗಳು. ಯಾವುದೂ ಹೊಳೆಯಲಿಲ್ಲ. ನಾನು ಕೇರಿಯಲ್ಲಿ ಉಳಿದರೆ ನನ್ನ ಹೊಟ್ಟೆಯೊಳಗೆ ಬೆಳೆಯುವ ನನ್ನ ಚಂದ್ರಮನ ಬೆಳಕು ಹೊರಗೆ ತುಳುಕುತ್ತದೆ. ಸಾಮಾಜಿಕ ಭಯ. ದಾಶನಿಗೆ ಈ ಕತೆಯನ್ನೆಲ್ಲ ಹೇಳಿಕೊಂಡರೆ ಆತ ಒಪ್ಪಬಹುದು. ಆದರೆ ದಾಶನ ಮನೆಯಲ್ಲಿ ಬಂದು ನಿಲ್ಲಲು ಇವರಿಗೆ ಸಾಧ್ಯವೆ?

ನನ್ನ ತಾಯಿ, ಹೆಣ್ಣು ಜೀವ ತೆಗೆದುಕೊಳ್ಳುವ ನಿರ್ಣಯವನ್ನೆ ಅಂಗೀಕರಿಸಿದಳು. ಈ ಸಂಬಂಧಕ್ಕೆ ಅವಳು ಚಾಪಲ್ಯಕ್ಕಿಂತ ಹೆಚ್ಚು ಸ್ಥಿರತೆ ಕೊಡುವುದು ತನ್ನ ಜೀವಿತಕ್ಕೆ ಅಷ್ಟು ಕ್ಷೇಮಕರವಲ್ಲವೆಂದಳು.

ದಾಶನ ಮಗಳು ಇದ್ದಕ್ಕಿದ್ದಂತೆಯೆ ಒಂದು ದಿನ ಕಣ್ಮರೆಯಾದಳು . ಕೇರಿಯಲ್ಲೆಲ್ಲ ವಿವಿಧ ಪ್ರತಿಕ್ರಿಯೆಯಾಯಿತು. ಅದರ ವಾಸನೆ ದಾಶನಿಗೂ ಬಡಿಯಿತು. ಆದರೆ ಏನಿದ್ದರೂ ಅವಳು ತನ್ನಲ್ಲಿ ಸರ್ವವನ್ನೂ ಬಿಚ್ಚಿ ಹೇಳುವವಳು. ಹರಗೋಲು ಆಚೆಯ ದಡದಲ್ಲಿದೆ ಎಲ್ಲಿ ಹೋದಳೊ...ದಾಶ ದಂಪತಿಗಳು ದ್ವೀಪದಲ್ಲೆಲ್ಲ ವಿಚಾರಿಸಿದರು. ಸುತ್ತು ಹಳ್ಳಿಗಳಲ್ಲಿ ಕೇಳಿದರು. ಮಗಳು ಸಿಕ್ಕಲಿಲ್ಲ. ತನ್ನ ಭೋಗವೆಂದು ಆತ ಕಂಬನಿ ಕೂಳು ಕೂಡಿ ತಿನ್ನುತ್ತ ಇದ್ದ.

ಕಾಡಿನಲ್ಲಿಯೆ ತಾಯಿ ನನಗೆ ಜನ್ಮವಿತ್ತಳು. ಹತ್ತು ದಿನ ಪೂರೈಸಿತು. ಒಂದು ದಿನ ಇನ್ನೂ ಸೂರ್ಯ ಏಳುವ ಮುನ್ನವೆ ನನ್ನನ್ನು ಅಜ್ಜಿಯ ಕೈಗೆ ಇತ್ತು ಹೊರಟು ಹೋದಳು. ಅಜ್ಜಿ ಇನ್ನೊಮ್ಮೆ ತನ್ನ ಸೊಸೆಯ ಮುಖ ನೋಡಲು ಬಾಗಿಲವರೆಗೂ ಬಂದಳು. ಆದರೆ ಅವಳ ಹಣ್ಣಾದ ಕಣ್ಣಿಗೆ ಅವಳ ಬೆನ್ನು ಮಾತ್ರ ಕಂಡಿತು.

ಕೆಲದಿನ ಕಳೆದ ಮೇಲೆ ಒಂದು ಬೆಳಗಿನಲ್ಲಿ ದಾಶ ದಂಪತಿಗಳು ಇನ್ನೂ ಕದ ಹಾಕಿಕೊಂಡು ಹಾಸಿಗೆಯ ಮೇಲಿದ್ದರು. ಹೊರಗಿನಿಂದ ತಾಯಿ ದಾಶನನ್ನು "ತಂದೆಯೆ..." ಎಂದು ಕೂಗಿದಳು. ದಾಶ ತೂಗಾಡುತ್ತ ಬಂದು ಬಾಗಿಲು ತೆರೆದ. ಮಗಳನ್ನು ಕಂಡು ಅಪ್ಪಿಕೊಂಡ. ದಾಶನ ಹೆಂಡತಿ ನನ್ನ ತಾಯಿಯನ್ನು ಅಪ್ಪಿ ಮುದ್ದಾಡಿದ್ದೂ ಮುದ್ದಾಡಿದ್ದೆ.

ದಾಶನಾಗಲಿ, ಅವನ ಹೆಂಡತಿಯಾಗಲಿ ಮಗಳು ಮನೆಗೆ ಬಂದದ್ದೆ ಸಾಕು ಎಂದು ಅವಳ ನಿರ್ಗಮನದ ಕತೆ ಕೇಳದೆ ಸುಮ್ಮನಿದ್ದರು. ಆದರೆ ಕೇರಿಯ ಜನ ಸುಮ್ಮನಿರಬೇಕೆ? ನನ್ನ ತಾಯಿಯನ್ನು ಕೆದರಿ ಕೇಳಿದರು. ತಾಯಿ ಅವರಿಗೆ ಸಮಾಧಾನ ಹೇಳಿದಳು.

ಅಲ್ಲದೆ ತಾನು ಇಂತಹನೊಬ್ಬನನ್ನು ಮೆಚ್ಚಿಕೊಂಡೆ ಎಂದರೂ ಆಗ ಆ ಜನರಲ್ಲಿ ಅಂತಹ ಅಪರಾಧವೂ ಆಗಿರಲಿಲ್ಲ.

ಅಂತೂ ನಾನು ಅಜ್ಜಿಯ ಮನೆಯಲ್ಲಿ ಬೆಳೆದೆ. ನನ್ನ ತಾಯಿಯ ಜೀವನ ನೌಕೆಯಲ್ಲಿ-ಹರಗೋಲು ಏರಿ ದಾಟಿದವರು ನನ್ನ ಸಾಕ್ಷಾತ್ ತಂದೆ-ಮಹರ್ಷಿ ಪರಾಶರರೆಂದು ಬಳಿಕ ಪ್ರಸಿದ್ಧರಾದ ವ್ಯಕ್ತಿಯೇ ಆಗಿದ್ದರು.

ನಾರದರ ಮಾತಿನಿಂದ ನನ್ನ ತಾಯಿಯ ರಹಸ್ಯ ತಿಳಿದು ನನಗೆ ಹಿಗ್ಗಾಯಿತು. ನನ್ನ ತಂದೆಯಂತಹ ಪ್ರಚಂಡ ಮಹರ್ಷಿಗಳಿಗೆ, ಧರ್ಮದರ್ಶನ ಮಾಡುವ ಮಹಿಮರಿಗೆ ಸಾಮಾಜಿಕ ಪ್ರವಾಹದೆದುರು ತಮ್ಮ ಕೃತಿಯನ್ನು ಸಮರ್ಥಿಸಿಕೊಳ್ಳುವುದಾಗಲಿಲ್ಲ. ಹಾಗಿದ್ದರೆ ಅವರು

ಸಮಾಜ ಒಪ್ಪದ್ದನ್ನು ಮಾಡಿದರೆ? ದೊಡ್ಡವರೇ ಸಮಾಜಕ್ಕೆ ಸೇರದ್ದನ್ನು ಮಾಡಿದರೆ ಸಣ್ಣವರ ಗತಿ ಏನು?

ಹಾಗಾದರೆ...ನಾನು... ಯಾರು? ಇಂತಹ ಸಮಾಜ ಒಪ್ಪದ ಆಚರಣೆಯ ದೃಷ್ಟಾಂತವೆ? ನನ್ನ ತಲೆಯಲ್ಲಿ ಹೊಸ ಚಕ್ರಕ್ಕೆ ತ್ರುಟಿ ಪೂರ್ಣ ಗತಿ ಸಿಕ್ಕಿತು. ಆದರೆ ನನ್ನ ತಂದೆಯ ಮಹಾ ಶಕ್ತಿಯಲ್ಲಿ ನನಗೇ ಏಕೆ, ದೇಶಕ್ಕೇ ವಿಶ್ವಾಸವಿತ್ತು. ನನ್ನ ತಾಯಿ ಹೆಣ್ಣು ಧರ್ಮಕ್ಕೆ ಯುಕ್ತವಾದುದನ್ನು ಮಾಡಿದಳು.

ಇಂತಹ ಚಿಕ್ಕ ಸಂಗತಿಯ ಇತ್ಯರ್ಥ ಮಾಡಲು ನಾನು ತಿಣಿಕಾಡುವುದು ವ್ಯರ್ಥವೆನ್ನಿಸಿ ಅದನ್ನು ಅದರ ಪಾಲಿಗೇ ಬಿಟ್ಟೆ. ಆದರೂ ನನ್ನ ತಂದೆ ನನಗೆ ತಮ್ಮ ಅಪಾರ ಮೇಧಾಪ್ರಭಾವವನ್ನು ಕರುಣಿಸಿದ್ದರು. ಗುರು ಕುಲದಲ್ಲಿ ಆಗಾಗ ಅನ್ನುತ್ತಿದ್ದರು. ದ್ವೈಪಾಯನ, ಮಹಾ ಧೀಮಂತ ಪಿತ್ರಾರ್ಜಿತವಾದ ಅಕ್ಷಯ ಆಸ್ತಿಯನ್ನು ಅನುಭೋಗಿಸುತ್ತಾನೆ. ಮತ್ತೆ ನನಗೆ ಸ್ಪಷ್ಟವಾದ ಅನುಭವ ಬಂದಿತ್ತು. ನಮ್ಮ ತಂದೆ ಸಾಮಾನ್ಯ ಸಾಮಾಜಿಕರಾಗಿದ್ದರೆ ಅವರ ಈ ಸಂತಾನ ವಿಧಿ ಅವರಿಗೆ ತೊಡಕಾಗಬಹುದಿತ್ತು. ಅವರು ಸಾಮಾಜಿಕ ಜೀವನ ಮೀರಿದ ಧೈರ್ಯ ,ಯೋಗ್ಯತೆ ಪಡೆದ ಮಹಿಮರೇ ಆಗಿದ್ದರು. ಅಂತೆಯೆ ಮುಂದೆ ಸರ್ವವಿದಿತವಾದ ಈ ಕತೆಯನ್ನು ನಾನು ಹಲವರ ಬಾಯಿಯಿಂದ ಅಭಿಮಾನದ ಸಂಗತಿ ಎಂದು ಕೇಳಿದ್ದೇನೆ.

ಈ ಕತೆಯನ್ನು ನಮ್ಮ ಗುರುಕುಲದಲ್ಲೆಲ್ಲ ಕೊನೆಗೆ ಕೇಳಿದ ವ್ಯಕ್ತಿಯೆ ನಾನು. ಅಂತೂ ನನ್ನ ತಂದೆ-ತಾಯಿಗಳ ಬ್ರಹ್ಮಗಂಟು ಬಿಚ್ಚಿತು.

# ವೇದ ಸಂಕಲನ

ನಾನಿನ್ನೂ ಗುರುಕುಲದಲ್ಲಿ ಓದುತ್ತಿರುವಾಗಲೆ ನನ್ನ ಅಜ್ಜ ತೀರಿಕೊಂಡ ಸಮಾಚಾರ ತಿಳಿಯಿತು. ಈ ಸಮಾಚಾರವನ್ನು ಸ್ವತಃ ಕುಲಪತಿಗಳೇ ನನಗೆ ಹೇಳಿದರು. ಕುಲಪತಿಗಳಿಗೆ ನನ್ನ ಅಜ್ಜಿ ಕೆಲಕಾಲ ಆಚಾರ್ಯಾನಿ. ಆ ಸಮಾಚಾರವನ್ನು ಆ ದಿನ ಗುರುಗಳೇ ನನಗೆ ವಿವರಿಸಿದರು.

ನನ್ನ ಅಜ್ಜ ವಸಿಷ್ಠರ ಮಗ ಶಕ್ತಿ. ವಸಿಷ್ಠರಿಂದ ಬಂದ ಅದ್ಭುತ ವಿದ್ಯೆಗೆಲ್ಲ ಶಕ್ತಿ ಆಗರವಾಗಿದ್ದರು. ವಸಿಷ್ಠರ ಗುರುಕುಲದಲ್ಲಿ ಅವರು ಯೋಗದ ಅಧ್ಯಾಪಕರು. ಶಕ್ತಿ ಅಸುರ ನಿರ್ಮೂಲನ ಕಾರ್ಯದಲ್ಲಿ ಆ ಕಾಲದ ಕ್ಷತ್ರಿಯರಿಗೆ ಅಸ್ತ್ರನಿರ್ಮಾಣ ವಿಧಿಯಲ್ಲಿ ಅನುಪಮ ಸಹಾಯ ಮಾಡಿದರು. ದೈತ್ಯರು ಕಲ್ಪನೆ ಮಾಡದಂತಹ ಅಸ್ತ್ರಗಳನ್ನು ನಿರ್ಮಿಸಿ ಅವರ ಮೇಲೆ ಸೈನಿಕ ಕ್ರಮ ಜರುಗಿಸುವಲ್ಲಿ ಕ್ಷತ್ರಿಯರ ಕೈ ಮೇಲಾಗ ಹತ್ತಿತ್ತು. ಇದರಿಂದ ದೈತ್ಯರು ದೇವತೆಗಳನ್ನು, ಕ್ಷತ್ರಿಯರನ್ನು ದ್ವೇಷಿಸುವುದಕ್ಕಿಂತ ಹೆಚ್ಚಾಗಿ ಶಕ್ತಿಯ ಮೇಲೆ ವಿಷಕಾರ ಹತ್ತಿದರು.

ಆಗ ವಸಿಷ್ಠ-ವಿಶ್ವಾಮಿತ್ರರ ಮನಸ್ತಾಪವೂ ಒಂದಿತ್ತು. ಈ ಸಂದರ್ಭವರಿತು ರಾಕ್ಷಸರು ತಮಗೆ ವಿಶ್ವಾಮಿತ್ರರ ಬೆಂಬಲವಿದೆ ಎಂದು ಅಪಪ್ರಚಾರ ಮಾಡಹತ್ತಿದರು. ಇದರ ನಿವಾರಣೆಗಾಗಿ ವಿಶ್ವಾಮಿತ್ರರು ರಾಕ್ಷಸರ ನಿರ್ಮೂಲನೆಗಾಗಿ ಮತ್ತೆ ಬಿಲ್ಲು ಹಿಡಿಯಬೇಕಾಗಿ ಬಂತು.

ಆದರೆ ಅವರಿಗೂ ವಸಿಷ್ಠರಿಗೂ ತಾತ್ವಿಕ ಭಿನ್ನಾಭಿಪ್ರಾಯ ಬೆಳೆಯುತ್ತಲೇ ನಡೆದಿತ್ತು. ಒಂದು ದಿನ ರಾಕ್ಷಸರು ಹೊಂಚು ಹಾಕಿ, ಶಕ್ತಿ ಯೋಗ ಸಮಾಧಿಯಲ್ಲಿದ್ದಾಗ ಅವರನ್ನು ತುಂಡರಿಸಿ ಸಮುದ್ರದಲ್ಲಿ ಎಸೆದರು. ಅಜ್ಜಿ ಸಮಾಧಿಯ ಉಪ ಶಮನದ ಸಮಯ ತಿಳಿದು ತನ್ನ ಪತಿಗೆ ಘೃತ ಕೊಡಲು ಹೋದಾಗ ನೋಡುತ್ತಾಳೆ, ಆಸನ ಬರಿದು. ಅಲ್ಲಲ್ಲಿ ನೆತ್ತರು ಬಿದ್ದಿದೆ.

ಕೂಡಲೆ ಅವಳು ನೆಲದಲ್ಲಿ ಹೊರಳಾಡಿ ಅಳ ಹತ್ತಿದಳು. ಶಿಷ್ಯರೆಲ್ಲ ಓಡಿ ಬಂದರು. ಕುಲಪತಿಗಳಾಗಿದ್ದ ವಸಿಷ್ಠರಿಗೆ ಸಮಾಚಾರ ಹೋಯಿತು. ಅವರು ವಜ್ರದಂತಹ ಮನುಷ್ಯರು. 'ಆಯಿತು; ಭಗವಂತನ ಇಚ್ಛೆ' ಎಂದರು.

ನನ್ನ ತಾತನ ಮರಣದ ಬಗ್ಗೆ ನೂರು ಕತೆಗಳು ಹುಟ್ಟಿದವು. ರಾಕ್ಷಸರು ಈ ಅಪರಾಧವನ್ನು ವಿಶ್ವಾಮಿತ್ರರ ತಲೆಗೆ ಕಟ್ಟುವಂತೆ ಪ್ರಚಾರ ನಡೆಸಿದರು. ಹಲವರು ಹಲವು ವಿಧದಿಂದ ಶಂಕಿಸಿದರು. ಇದರ ಬಗ್ಗೆ ಅತ್ಯಂತ ದೃಢ ಅಭಿಪ್ರಾಯ ಅಜ್ಜಿಯ ಹೊರತು ಬೇರೆ ಯಾರೂ ತಳೆಯಲಿಲ್ಲ. ಅಜ್ಜನ ಮರಣದಿಂದ ರಾಕ್ಷಸರಿಗೆ ಸಂತೋಷವಾಗಿತ್ತು.

ಕುಲಪತಿಗಳು ನನ್ನ ಅಜ್ಜಿಯ ದುಃಖಮಯ ಜೀವನದ ಹಿನ್ನೆಲೆಯನ್ನು ಹೇಳಿದರು. ನನ್ನ ಅಜ್ಜಿಗೆ ತಂದೆಯವರು ಏಕ ಮಾತ್ರ ಪುತ್ರರು. ನಾನು ಚಿಕ್ಕಂದಿನಲ್ಲಿ ಅವಳ ಹತ್ತಿರ ಇರುವಾಗ ರಾಕ್ಷಸರೆಂದರೆ ಅಜ್ಜಿ ಉರಿದು ಬೀಳುತ್ತಿದ್ದರು. ಅದರ ಕಾರಣ ಇಂದು ನನಗೆ ಸ್ಪಷ್ಟವಾಯಿತು. ಗುರುಗಳು ಸ್ನಾನ ಮಾಡಿ ತಮ್ಮ ಆಚಾರ್ಯನಿಗೆ ತರ್ಪಣ ಸಲ್ಲಿಸಿದರು.

ಮತ್ತೆ ಕೆಲವು ವರುಷಗಳು ಉರುಳಿದವು. ವಾಮ ದೇವಾಶ್ರಮದಿಂದ ಕಳೆದ ವರುಷ ಐದು ಜನ ವಿದ್ಯಾರ್ಥಿಗಳು ನಮ್ಮ ಗುರುಕುಲಕ್ಕೆ ಬಂದಿದ್ದರು. ಇಲ್ಲಿಂದ ಎಂಟು ಜನ ವಿದ್ಯಾರ್ಥಿಗಳನ್ನು ಅಲ್ಲಿಗೆ ಕಳಿಸಲಾಗಿತ್ತು. ಇಲ್ಲಿಗೆ ಬಂದ ವಿದ್ಯಾರ್ಥಿಗಳಲ್ಲಿ ಯಮಳರಾದ ರೈಭ್ಯ ಪುತ್ರರು ನಮ್ಮ ಗುರುಕುಲದ ಆ ವರ್ಷದ ವಿದ್ಯಾರ್ಥಿಗಳಾಗಿದ್ದರು. ಕಳೆದ ಸಲದ ವಾರ್ಷಿಕೋತ್ಸವದಲ್ಲಿ ಕುಲಪತಿಗಳು ಆಚಾರ್ಯ ರೈಭ್ಯರು ಸಿದ್ಧಿಯನ್ನು ಪ್ರಶಂಸಿಸುತ್ತಾ ಯಮಳ ಕುಮಾರರ ವಿದ್ಯಾ ಶಕ್ತಿಯನ್ನು ಹೊಗಳಿದರು.

ಅವರಲ್ಲಿ ಹಿರಿಯನಾಗಿ ಕಾಣುವ ವಿಶ್ವಾವಸುವಿಗೆ ವೇದ ವಿದ್ಯೆಯಲ್ಲಿ ಸಾಕಷ್ಟು ಆಸಕ್ತಿ ಪರಿಶ್ರಮ. ನಾನು ಇತ್ತೀಚೆಗೆ ಯೋಗ ಪದವಿಯನ್ನು ಪೂರೈಸಿ ಮತ್ತೆ ನನ್ನ ನೆಚ್ಚಿನ ವಿಷಯವಾದ ವೇದ ಶೋಧನದಲ್ಲಿ ತೊಡಗಿದ್ದೆ.

ಈ ಸಲದ ಸ್ನಾತಕ ಸಮಾರಂಭಕ್ಕಾಗಿ ಮಹಾ ಕುಲಪತಿ ಕಣ್ವರು ಅತಿಥಿಗಳು. ನಾವು ಗುರುಕುಲದಲ್ಲಿ ನೋಡಿದ ಸಮಾರಂಭಗಳಲ್ಲಿಯೆ ಇದು ಅಭೂತ ಪೂರ್ವವಾಗಿತ್ತು. ನನಗೆ ಆ ಸಲ ವಿಶೇಷ ಪುರಸ್ಕಾರ ಪ್ರಶಸ್ತಿಗಳು. ದೊರೆತವು. ಯೋಗ ವಿಭಾಗದಲ್ಲಿ ವಿಶ್ವಾವಸುಗೆ, ರಸಾಯನದಲ್ಲಿ ಪರಾವಸುಗೆ ಅರ್ಹತೆಯೊಡನೆ ಪ್ರಶಸ್ತಿಗಳು.

ಸಮಾರಂಭದಲ್ಲಿ ಮಹರ್ಷಿ ಕಣ್ವರ ಭಾಷಣ ನೂತನವಾಗಿತ್ತು. ಅದು ನಮ್ಮೆಲ್ಲರ ಕಣ್ಣು ತೆರೆಸಿತು. ಸ್ನಾತಕರಾಗಿ ಗುರುಕುಲದಿಂದ ಹೊರಟ ವಿದ್ಯಾರ್ಥಿಗಳು ಚದುರಿ ಹೋಗುತ್ತಿದ್ದರು. ಆಯುಷ್ಯದಲ್ಲಿ ಒಬ್ಬರೊಬ್ಬರಿಗೆ ಕೂಡಿ ಬಾಳುವ ಸಂದರ್ಭವೆ ಬಂದ ದೃಷ್ಟಾಂತಗಳಿಲ್ಲ. ಗುರುಕುಲದಿಂದ ಹೊರಗೆ ಹೊರಟಿರುವ ಅವರು ವಿದ್ಯಾಲಯವನ್ನೋ, ಚಿಕ್ಕ ಪಾಠ ಶಾಲೆಯನ್ನೋ, ಪೌರೋಹಿತ್ಯವನ್ನೋ ನಡೆಸಿಕೊಂಡು ಜೀವನಯಾಪನೆ ಮಾಡುವುದೇ ಹೆಚ್ಚು. ಸಾವಿರಕ್ಕೊಬ್ಬರು ಎಲ್ಲೋ ನಿರ್ಜನ ಕಾಡಿನಲ್ಲಿ ವಿಶೇಷ ಶಕ್ತಿಗಾಗಿ ತಪಸ್ಸು ಮಾಡತೊಡಗಬೇಕು. ತಪಸ್ಸಿನ ಮುಕ್ತಾಯವು ಮತ್ತೆ ಅನಿರ್ದಿಷ್ಟ. ಅಂದು ಗುರುಕುಲದಲ್ಲಿ ಏನೋ ಆದರ್ಶ ಹಣೆದುಕೊಂಡು ಭಾವನಾವಶರಾಗಿ ಮನೆಗಳಿಗೆ ತೆರಳಿದ ಬಳಿಕ ಆದರ್ಶವನ್ನು ಮರೆತವರೇ ಹೆಚ್ಚು ಜನ. ಆದರೆ ಈ ಸಲದ ಸ್ನಾತಕ ವೃಂದವು ಉತ್ಕಟವಾಗಿತ್ತು. ಅಲ್ಲದೆ ನಮ್ಮ ಜೀವನದ ಪ್ರತಿಯೊಂದು ಭಾಗದ ಮೇಲೆ ತನ್ನ ಪ್ರಭಾವ ಮುದ್ರೆಯನ್ನೊತ್ತುವ ಕಣ್ವರ ಭಾಷಣ.

ಪರಿಣತಮತಿಗಳಾದ ಅಂತೇವಾಸಿಗಳು ಗುರುಕುಲದಿಂದ ಇನ್ನು ಕೆಲವೇ ಸೂರ್ಯೋದಯದಲ್ಲಿ ಹೊರಡುತ್ತಾರೆ. ಆದರೆ ಅವರ ಜೀವನ ದಾರಿ ಇನ್ನೂ ಮುಕ್ಕಾಲುವಾಸಿ ಇದೆ. ಇಂದು ಈ ಭೂಮಿಯಲ್ಲಿ ಹಲವು ಗುರುಕುಲ ಇವೆ, ಸಾಕಾಗುವಷ್ಟಿವೆ. ನಾಳೆ ನೀವೂ ಗುರುಕುಲದಿಂದ ಹೊರಗೆ ಕಾಲಿಟ್ಟು ಮತ್ತೆ ಒಂದು ಹೊಸ ಗುರುಕುಲವನ್ನೋ ಪಾಠ ಶಾಲೆಯನ್ನೋ ನಿರ್ಮಿಸಬೇಡಿ, ಸೇರಬೇಡಿ.

ಇಂದು ರಾಷ್ಟ್ರಕ್ಕೆ ಬುದ್ಧಿವಂತರಿಂದ ಆಗಬೇಕಾದ ಸೇವೆ ಬರಿ ಗುರುಕುಲ ನಿರ್ಮಾಣವಲ್ಲ. ನೀವು ಗುರು ಕುಲದಲ್ಲಿ ಓದಿದ್ದೀರಿ. ಇದು ಬಹು ಮಟ್ಟಿಗೆ ಮಹಾನುಭಾವರ ಸ್ವಾನುಭವ. ಅಧ್ಯಾಪಕರು ಅನುಭವ ಸಂಪನ್ನರಾಗಬೇಕು. ಇಂದು ಗುರುಕುಲಗಳಿಗೆ ಸತ್ವದ ಅಗತ್ಯವಿದೆ. ಓದು ಹಾಗು ಓದಿಸುವುದು ಇಂದಿನ ಸಮಸ್ಯೆ ಅಲ್ಲ. ಏನನ್ನು ಓದಿಸುವುದು ಎಂಬ ಪ್ರಶ್ನೆ ಇದೆ. ಆದ್ದರಿಂದ ಪರಿಣತರಾದ ನೀವು ಚದುರಿ ಚಲ್ಲಾಪಿಲ್ಲಿಯಾಗದೆ ಸಮನ್ವಿತರಾಗಿ ಮಂಡಲಗೊಂಡು ಶ್ರಮಿಸುವ ಕಾಲ ಬಂದಿದೆ.

''ಗುರುಕುಲದಲ್ಲಿ ಪಾಠವನ್ನು ಯಾರೂ ಹೇಳಬಹುದು. ಆದರೆ ಹೇಳುವ ಪಾಠವನ್ನು ನಿರ್ಮಿಸುವ ಅನುಭವ ಸಿದ್ಧಿ ಹೊಸಬರಾದ ನಿಮ್ಮಿಂದ ಬರಬೇಕು. ಅನಂತವಾದ ವೇದ ಚದುರಿದಂತೆ ಅಚೆಗೀಚೆಗೆ ಹರಹಿಕೊಂಡಿದೆ. ಅದು ವ್ಯವಸ್ಥೆಗೊಳ್ಳಬೇಕು. ಅಧ್ಯಾತ್ಮವು ವೈಯಕ್ತಿಕ ಅನುಭವವಾಗಿ ಮಾತನ್ನು ದಾಟಿ ಸುಮ್ಮನೆ ಮರೆಯಹತ್ತಿದೆ. ಅದನ್ನು ಹಿಡಿದು ಮಾತಿಗೆಳೆತರುವ ಮಹಾ ಕಾರ್ಯವಾಗಬೇಕು.

'ದೇವತೆಗಳು, ರಾಕ್ಷಸರು, ಮಾನವರು ಮೊದಲಾದ ಸಮಸ್ತರ ಸಮಗ್ರ ಇತಿಹಾಸದ ಸುಸಂಬದ್ಧ ಸಂಕಲನವಾಗಬೇಕು. ಗುರುಕುಲಗಳು ಸಾವಿರವರುಷ ನಡೆದರೂ ಇದರಿಂದ ಹೊರಡುವಾಗ ಇಂತಹದೊಂದು ಪ್ರಚಂಡ ಕೆಲಸಕ್ಕೆ ನಿಮ್ಮನ್ನು ಮೀಸಲಿಟ್ಟುಕೊಳ್ಳುವ ಪ್ರತಿಜ್ಞೆ ಮಾಡಬೇಕು.''

ಕಣ್ವರ ಭಾಷಣಕ್ಕೆ ಸಭೆ ತಲೆದೂಗಿ ಹೋಯಿತು. ಅದು ಶ್ರೋತೃಗಳ ತಲೆಯನ್ನಷ್ಟೇ ತೂಗಿಬಿಡಲಿಲ್ಲ, ವ್ಯಕ್ತಿಯ ಜೀವನದ ಅರ್ಹತೆಯನ್ನೇ ಪ್ರಶ್ನಿಸಿತು. ಆ ದಿನ ಸಾಯಂಕಾಲ ನದೀತೀರದಲ್ಲಿ ಗುರುಕುಲವಾಸ ಪೂರ್ತಿಗೊಳ್ಳುವ ವಿದ್ಯಾರ್ಥಿಗಳ ಒಂದು ಪುಟ್ಟ ಸಭೆ ಸೇರಿತು. ಎಲ್ಲರೂ ಕಣ್ವರ ಭಾಷಣದ ಬಗ್ಗೆ ಏನಾದರೊಂದು ನಿರ್ಧಾರಕ್ಕೆ ಬರುವಾ ಎಂದರು. ಹೊಸ ಯೋಜನೆಯ ಬಗ್ಗೆ ಹಲವರು ಹಲವು ವಿಧದಿಂದ ಅಭಿಪ್ರಾಯ ಹೇಳಿದರು. ನಾವು ಹದಿನೆಂಟು ಜನ ವಿದ್ಯಾರ್ಥಿಗಳು, ಮೂವರು ವಿದ್ಯಾರ್ಥಿನಿಯರು ಆ ವರುಷ ಗುರುಕುಲದಿಂದ ನಿರ್ಗಮಿಸುವವರು. ಕೊನೆಯಲ್ಲಿ ನಾನು, ವಿಶ್ವಾವಸು ಹಾಗು ಸ್ಮೃತಿಗಳು ಸೇರಿ ನಾಳೆ ಒಂದು ಯೋಜನೆ ಸಿದ್ಧಪಡಿಸಬೇಕೆಂದೂ, ಅದನ್ನು ಎಲ್ಲರೂ ಒಪ್ಪಿಕೊಳ್ಳುವದೆಂದೂ, ನಿಶ್ಚಯವಾಯಿತು. ಆದರೆ ಬಲಾಕಿ ಮಾತ್ರ ತನ್ನ ಅಶಕ್ತತೆಯನ್ನು

ಹೇಳಿಕೊಂಡು ತಾನು ಪೂರ್ಣ ಸಮಯದ ಕೆಲಸ ಮಾಡಲು ಸಾಧ್ಯವಿಲ್ಲವೆಂದೂ, ಮುಖ್ಯಸ ತಂದೆ ತಾಯಿಗಳ ಬಂಧನವಿದೆ ಹಾಗು ತಾನು ಆಶ್ರಮ ಬಿಟ್ಟಿರದಂತೆ ರಾಜಕೀಯ ನಿರ್ಬಂಧವೂ ಬರಬಹುದಾಗಿದೆ ಎಂದು ಹೇಳಿದ. ಗೆಳೆಯರೆಲ್ಲರೂ ಅದನ್ನು ಒಪ್ಪಿ ಅವನಿಗೆ ಅನುಮತಿ ನೀಡಿದರು.

ನಾವು ಮೂವರೂ ಸ್ನೇಹಿತರಿಗೆ ಒಪ್ಪಿಸಿದ ವರದಿ ಹೀಗಿತ್ತು..

''ನಾವು ಇಪ್ಪತ್ತು ಜನ ನಾಲ್ಕು ವಿಭಾಗದಲ್ಲಿ ಕಾರ್ಯ ಆರಂಭಿಸಬೇಕು. ವೇದ ಸಂಕಲನ, ಶೋಧನೆ ಹಾಗು ವ್ಯವಸ್ಥೆ. ಯೋಗ ಹಾಗು ಪುರುಷಾರ್ಥಗಳ ಬಗ್ಗೆ ನಿರ್ದಿಷ್ಟ ಹಾದಿ. ದೇವ, ದಾನವ, ಮಾನವರ ಚಾರಿತ್ರಿಕ ಶೋಧನೆ. ಕೊನೆಯದಾಗಿ, ಜನಪದದಲ್ಲಿ ಸಾಮರಸ್ಯ ಬೆಳೆಯಲು ಭಕ್ತಿ ತಂತ್ರವನ್ನು ಪ್ರಚುರಪಡಿಸುವುದು.''

ನಮ್ಮ ಯೋಜನೆ ವ್ಯವಸ್ಥಿತವಾಗಿ ನಡೆಯಲು ಈ ಗುಂಪು ಏಕ ಸೂತ್ರವಾಗಿರಬೇಕು, ಬಯಸಿದಾಗ ನಾವೇ ಇದರ ಪೂರ್ತಿ ಹೊಣೆ ಹೊರಬೇಕೆಂದು ತೀರ್ಮಾನವಾಯಿತು. ನಾವು ಗುರುಗಳ ಆಶೀರ್ವಾದ ಪಡೆದು ಗುರುಕುಲದಿಂದ ಶತದ್ರು ತೀರಕ್ಕೆ ಬಂದು ಒಂದು ಆಶ್ರಮ ಕಟ್ಟಿಕೊಂಡೆವು.

ಎಲ್ಲರೂ ತಮಗೆ ಪ್ರಶಸ್ತವೆನ್ನಿಸಿದ ಮೇರೆಗೆ ಕಾರ್ಯಪ್ರವೃತ್ತರಾದರು. ನಾನು ವೇದ ಸಂಕಲನಕ್ಕಾಗಿ ಕಾಡು, ನದೀ ತೀರಗಳನ್ನೆಲ್ಲ ಅಲೆದು ಋಷಿಗಳನ್ನು ಕಂಡು ಅವರ ದರ್ಶನಗಳನ್ನೂ ಮಂತ್ರಗಳನ್ನೂ ಕಲೆ ಹಾಕತೊಡಗಿದೆ. ಈ ಭಾಗದಲ್ಲಿ ನಾನು ಕೆಲಸ ಮಾಡುವಾಗ ನನಗೆ ಬಂದ ಅನುಭವ ಅದ್ಭುತವಾದದ್ದು.

ನಾನು ಶತದ್ರು ನದಿಯಿಂದ ಹೊರಟು ಸದಾನೀರಾಕ್ಕೆ ಬಂದಾಗ ಅಲ್ಲಿ ಗೋತಮ ಹಾಗು ಅಂಗಿರಸ ವಂಶಸ್ಥರಾದ ಋಷಿಗಳನ್ನು ಕಂಡೆ. ನನಗೆ ಋಷಿಗಳ ಮಂತ್ರಗಳನ್ನು ಗ್ರಹಿಸಲು ಗುರುಕುಲದಲ್ಲಿ ಪಡೆದ ಶಿಕ್ಷಾ ಸಾಮರ್ಥ್ಯ ಸಾಲದೆ ಹೋಯಿತು. ನಾನು ಸದಾ ನೀರಾ ತೀರದಲ್ಲಿ ನಿಂತು ಅಂಗಿರಸರ ಆದೇಶದಂತೆ ನನ್ನ ದೃಷ್ಟಿಯನ್ನು ತಿದ್ದಿಕೊಂಡು ಹೊಸ ಸಾಮರ್ಥ್ಯ ಪಡೆಯಲು ಪರಿಶ್ರಮಪಡಬೇಕಾಯಿತು. ಗೋತಮ ಪರಂಪರೆಯ ಋಷಿಗಳು ಋಷಿ ದರ್ಶನ ಹಾಗು ಸ್ಥಿತಿಗಳನ್ನು ಗ್ರಹಿಸಲು ಬೇಕಾಗುವ ಯೋಗಾನುಕೂಲತೆಯನ್ನು ಪಡೆಯಲು ಸಹಾಯ ಮಾಡಿದರು. ಅಲ್ಲಿಯೆ ನನಗೆ ವೇದ, ಹೀಗೆ ಚತುರ್ಮುಖವಾಗಿ ಬೆಳೆದುದರ ನೈಸರ್ಗಿಕ ಕತೆ ಗೊತ್ತಾಯಿತು. ಇನ್ನು ವ್ಯವಸ್ಥೆಯಾಗಬೇಕಾಗಿದ್ದು ಈ ವಿಭಾಗದಲ್ಲಿ ಅಲ್ಲ; ಹೊಸ ಋಕ್, ಸಾಮಗ್ರಿಗಳನ್ನು ಗುರುತಿಸುವುದು. ಯಜುಸ್ಸಲ್ಲಿ ವಿನಿಯೋಗವಾಗದೆ ಇರುವ ಋಕ್‌ಗಳನ್ನು ಶೋಧಿಸಿ ಯಜುಸ್ಸಿಗೆ ಅವುಗಳನ್ನು ಅನುವು ಮಾಡುವುದು. ಅಲ್ಲದೆ ಮಾನವ ಕಲ್ಯಾಣಕ್ಕಾಗಿ ಹೊಸ ಯಜುಃ ವಿಭಾಗವನ್ನು ಶೋಧಿಸುವುದು. ಈಗಾಗಲೆ ಹೊಸ ವಿನಿಯೋಗ ಸೂಕ್ತಗಳನ್ನು ಯಜುಃ ಪ್ರಪಂಚಕ್ಕೆ ಜೋಡಿಸುವುದು ನನ್ನ ಮುಂದಿನ ಕೆಲಸವಾಗಿತ್ತು. ನಾನು ಗುರುಕುಲ ಬಿಟ್ಟಾಗಿನಿಂದ ಬಾದರಾಯಣನಾಗಿದ್ದೆ.

ನಾನು ಅಲೆಯುತ್ತ ರೈಭ್ಯಾಶ್ರಮಕ್ಕೆ ಬಂದೆ. ಆದರೆ ಇಂದು ಆ ಆಶ್ರಮ ಶ್ಮಶಾನವಾಗಿ ತೋರುತ್ತಿತ್ತು. ನಾನು ವಿವಂಚನೆಗೊಂಡು ರೈಭ್ಯರ ಪರ್ಣ ಶಾಲೆಗೆ ಬಂದು ನೋಡುತ್ತೇನೆ. ಅಲ್ಲಿ ಗೆಳೆಯ ಪರಾವಸು ಮ್ಲಾನವಾಗಿ ಕುಳಿತಿದ್ದಾನೆ. ನಾನು ಆಶ್ರಮದಲ್ಲಿ ಪರಾವಸುವಿರಬಹುದೆಂದು ಭಾವಿಸಿರಲಿಲ್ಲ, ಆತ ಸರಸ್ವತೀ ತೀರದಲ್ಲಿ ಗಾಲವರ ಆಶ್ರಮಕ್ಕೆ ಯೋಗದ ಬಗ್ಗೆ ವಿವರ ಕಲೆ ಹಾಕಲು ಈ ಸಂವತ್ಸರದ ಆದಿಭಾಗದಲ್ಲಿ ಹೊರಟು ಹೋಗಿದ್ದ. ಅವನು ನಮ್ಮ ಆಶ್ರಮ ಕೇಂದ್ರಕ್ಕೆ ಬರುವುದಕ್ಕೆ ಇನ್ನೂ ಸಮಯವಿತ್ತು.

ನಾನು ಬಂದುದನ್ನು ಕಂಡು ಪರಾವಸುವಿಗೆ ಹೇಗೋ ಅನ್ನಿಸಿ ದುಃಖ ತಡೆಯದೆ ಗೋಳಿಟ್ಟು ಅತ್ತು ಬಿಟ್ಟ. ಒಳಗಿನಿಂದ ಪರಾವಸುವಿನ ಹೆಂಡತಿ ಬಂದು ನನ್ನನ್ನು ನೋಡಿ ಆಸನವಿತ್ತು ಉಪಚರಿಸಿದಳು. ಉದ್ವೇಗವೆಲ್ಲ ಕಳೆದ ಮೇಲೆ ಪರಾವಸು ತನ್ನ ಕತೆಯನ್ನು ಹೇಳಿದ.

'ರೈಭ್ಯರು ಮರಣ ಹೊಂದಿದರು'

ನನಗೆ ಆಘಾತವಾದಂತಾಯಿತು. ಏಕೆಂದರೆ ಅಂತಹ ಪ್ರಾಜ್ಞರ ಅಗತ್ಯ ದೇಶಕ್ಕೆ, ಜನಕ್ಕೆ ತುಂಬ ಇತ್ತು. ರೈಭ್ಯರನ್ನು ನಾನು ಕಳೆದ ವರುಷವೇ ಕಂಡಿದ್ದೆ. ಆಗ ನಾವೆಲ್ಲ ಸ್ನೇಹಿತರು . ಪರಾವಸುವಿನ ವಿವಾಹ ಸಮಾರಂಭಕ್ಕೆ ಬಂದಿದ್ದೆವು. ನಾನು ಬಹು ಖಿನ್ನವಾಗಿ ಕೇಳಿದೆ - ''ತಂದೆಯವರ ಮರಣ ಹೇಗೆ, ಎಂದು?''

ಇನ್ನೂ ಒಂದು ಮಾಸ ಕಳೆಯಲಿಲ್ಲ. ಬಂಧುವಿಗೆ ಈ ಸಮಾಚಾರ ಇನ್ನೂ ತಲುಪಿಲ್ಲ. ಆತ ಹಿಮಗಿರಿಯಲ್ಲಿ ತಪಸ್ಸು ತೊಡಗಿದ್ದಾನೆ. ಯೋಗದ ಬಗ್ಗೆ ಪ್ರತ್ಯಕ್ಷ ಅನುಭವಗಳನ್ನು ಪಡೆಯಲು ಹೋದವ ಇನ್ನೂ ಮರಳಿಲ್ಲ.

''ರೈಭ್ಯರಿಗೆ ಮರಣ ಹೇಗೆ ಬಂತು.?''

ಪರಾವಸು ತುಂಬ ವ್ಯಗ್ರನಾಗಿ ಶೋಕಿಸುತ್ತ ಹೇಳಿದ.

'ತಂದೆಯಾರಿಂದಲೂ ಸಾಯಲಿಲ್ಲ, ನನ್ನ ಕೈಯಿಂದ ಮರಣ ಹೊಂದಿದರು' .... ಅವನಿಗೆ ದುಃಖದ ಆವೇಗ ತಡೆಯಲಾಗಲಿಲ್ಲ. ನಾನು ಬೆಕ್ಕಸಬೆರಗಾಗಿ ಹೋದೆ. ಮಗನ ಕೈಯಿಂದ ಅದೂ ಪರಮ ಸಂಸ್ಕೃತ, ವೇದ ಪಾರಂಗತನಾದ ಸತ್ಪುತ್ರನಿಂದ .... ?

ಹೇಗೆ ಸಾಧ್ಯ ?

ಆದರೂ ತಾನೇ ವ್ಯಥೆಗೊಂಡು ಹೇಳುತ್ತಾನೆ - ಹಾಗಿದ್ದರೆ ಇದಕ್ಕಿಂತ ದುರ್ವಿಪಾಕ ಬೇರೆಯಿದೆಯೆ? ನಾನು ರೈಭ್ಯರಿಂದ ಹತ್ತಾರು ಸಂಗತಿಗಳನ್ನು ಕಲೆ ಹಾಕುವ ಆಸೆ ಇಟ್ಟುಕೊಂಡು ಬಂದುದು ವ್ಯರ್ಥವಾಗಿತ್ತು. ಆದರೂ ಪಿತೃಶೋಕದಿಂದ ವ್ಯಗ್ರ ಸ್ನೇಹಿತನನ್ನು ಸಾಂತ್ವನ ಮಾಡುವುದೂ ಅಗತ್ಯವೇ ಎನ್ನಿಸಿತ್ತು.

ಆ ದಿನ ನಾನೂ ಹೆಚ್ಚು ಮಾತಾಡಲಿಲ್ಲ. ಮರು ದಿನ ನಾವು ನದೀ ತೀರಕ್ಕೆ ಹೋದಾಗ ಪರಾವಸು ಎಲ್ಲ ಕತೆಯನ್ನು ವಿಶದವಾಗಿ ಹೇಳಿದ.

'ನಮ್ಮ ಪಕ್ಕದ ಮನೆಯ ಭರದ್ವಾಜ ಮುನಿಗಳು ನಿನಗೆ ಗೊತ್ತಷ್ಟೆ?'

'ಗೊತ್ತಿರದೆ ಏನು? ಅವರ ವಿಚಾರವಾಗಿ ನಾನು ಗಾಲವಾಶ್ರಮದಲ್ಲಿಯೇ ಕೇಳಿದ್ದೆ. ಅಲ್ಲದೆ ಕಳೆದ ಸಲ ಬಂದಾಗಲೆ ಸ್ವತಃ ನಿನ್ನ ತಂದೆ ಅವರ ಪರ್ಣ ಕುಟಿಯ ವರೆಗೆ ನನ್ನನ್ನು ಕರೆದುಕೊಂಡು ಹೋಗಿ 'ಈತ ಪಾರಾಶರ' ಎಂದು ಪರಿಚಯ ಮಾಡಿಕೊಟ್ಟಿದ್ದರು. ನಿನ್ನ ತಂದೆಯ ಅಭಿಪ್ರಾಯದಂತೆ ಅವರದು ತುಂಬು ಜೀವನ, ಒಳ್ಳೆ ಗಾಂಭೀರ್ಯ, ಎಂದೆ.

'ಪಾರಾಶರ, ಅದೆಲ್ಲ ನಿಜ. ಒಂದು ಕಾಲದಲ್ಲಿ ಈ ಆಶ್ರಮದ ಎರಡು ಕಣ್ಣುಗಳಾಗಿ ನನ್ನ ತಂದೆ, ಭರದ್ವಾಜರು ಬಾಳಿದರು. ನಾವು ನಮ್ಮ ತಂದೆಯಂತೆಯೆ ಅವರನ್ನು ಪೂಜ್ಯರಾಗಿ ಕಾಣುತ್ತಿದ್ದವು. ಅವರ ನಿಲುವು ಅಷ್ಟು ಪೂಜ್ಯ.

ನಮ್ಮ ತಂದೆಗೆ ಜನ ಸಂಪರ್ಕ ಹೆಚ್ಚು. ಸಾಮ್ರಾಟರು, ಚಕ್ರವರ್ತಿಗಳು ಇಲ್ಲಿ ಈ ಆಶ್ರಮ ಭೂಮಿಯವರೆಗೆ ರಥವೇರಿ ಬಂದು, ಆಶ್ರಮ ಸೀಮೆಯಲ್ಲಿ ರಥ ನಿಲ್ಲಿಸಿ ಬದ್ಧಾಂಜಲಿಯಾಗಿ ಕಾಲು ನಡೆಯಿಂದಲೆ ತಂದೆಯವರ ದರ್ಶನ ಪಡೆಯಬೇಕು. ತಂದೆಯವರೂ ಅಷ್ಟೆ. ಆತ ರಾಜನಾಗಿರಲಿ, ಪತಿತ ಶೂದ್ರನಾಗಿರಲಿ ತಮ್ಮ ಆಶ್ರಮ ಪದಕ್ಕೆ ಬಂದರೆ ಮುಂದೆ ಕರೆದು ಕ್ಷೇಮ ವಿಚಾರಿಸಿ ಅವರಿಗೆ ಬಂದ ತೊಂದರೆ ನಿವಾರಿಸಿ ಕಳುಹುವರು.

'ಭರದ್ವಾಜರಿಗೆ ಇದಾವುದೂ ಬೇಡ. ಪಾಪ, ಏಕಾಂತ ಪ್ರಿಯರಾದ ಅವರು ತಮ್ಮ ನಿಗೂಢಸಾಧನೆಯಲ್ಲಿ ದಿನಕಳೆಯುವರು. ಯಾವಾಗಲಾದರೂ ತಂದೆಯವರು ಆಶ್ರಮಕ್ಕೆ ಬಂದ ಅತಿಥಿಗಳನ್ನು ಭರದ್ವಾಜರ ಸಂದರ್ಶನಕ್ಕೆ ಕರೆದುಕೊಂಡು ಹೋದಾಗ 'ಸ್ವಸ್ತಿ' ಎನ್ನಬೇಕು ಅಷ್ಟೆ. ತಂದೆಯವರೇ ಭರದ್ವಾಜರ ಗುಣ ಗೌರವಗಳನ್ನು ವರ್ಣಿಸಬೇಕು.

'ಆದರೆ ಈ ಮಹಿಮರ ಹೊಟ್ಟೆಯಲ್ಲಿ ಯವಕ್ರೀತ ಒಬ್ಬನೇ ಮಗ. ಬೆಂಕಿಯಿಂದ ಹುಟ್ಟಿದ ಬೂದಿ. ಉದಾಸೀನರಾದ ಭರದ್ವಾಜರು ಮೊದಲು ನಮ್ಮ ತಂದೆಯಲ್ಲಿ ಆತನಿಗೆ ಪಾಠ ಹೇಳಿಸಿದರು. ಆದರೆ ಓದು ಪೂರ್ವದಲ್ಲಿದ್ದರೆ, ಯವಕ್ರೀತನಿಗೆ ಪಶ್ಚಿಮದಲ್ಲಿ. ಹತ್ತಾರು ತಲೆ ಮಾಸದ ಕ್ಷತ್ರಿಯ ಹುಡುಗರೊಡನೆ ಪ್ರಾಯ ಬಂದ ಬಳಿಕ ಮೃಗಯಾ ಹೊರಡುವನು. ಇತ್ತೀಚೆಗಂತೂ ಅವರ ತಂದೆ, ಅವನ ಬಗ್ಗೆ ಯಾವುದನ್ನೂ ಯೋಚಿಸುತ್ತಿರಲಿಲ್ಲ.

'ನಾವು ಗುರುಕುಲ ಸೇರಿದ್ದೆವು. ನಮ್ಮ ತಂದೆಯವರ ಹತ್ತಿರ ರಾಜರು ಬರುವುದು ಹೋಗುವುದು ನೋಡಿ ಇದು ಕೀರ್ತಿಕರವೆಂದು ಬಗೆದ. ತನ್ನ ತಂದೆಗೆ ಇದೆಲ್ಲ ಏಕಿರಬಾರದು? ರಾಜರು ನಮ್ಮ ಮನೆಗೇಕೆ ಬರಬಾರದು? ಎಂದೆಲ್ಲ ವಿಚಾರಿಸ ಹತ್ತಿದ. ಒಂದು ದಿನ ನೇರ ತಂದೆಯ ಹತ್ತಿರ ಈ ವಿಷಯವನ್ನು ಪ್ರಸ್ತಾಪಿಸಿದಾಗ ಅವರು ಹೇಳಿದರು.

'ರೈಭ್ಯರು ಬಹು ಧೀಮಂತರು. ಉಪಕಾರಿಗಳು. ರಾಜರಾಗಲಿ, ಇತರರಾಗಲಿ, ಅವರಿಂದ ಉಪಶಮನ ಪಡೆದು ಹೋಗುತ್ತಾರೆ.

'ನೀವೇಕೆ ಅದನ್ನೆಲ್ಲ ಮಾಡುವುದಿಲ್ಲ?'

'ನನಗೆ ಅದರಲ್ಲೆಲ್ಲ ಆಸಕ್ತಿ ಇಲ್ಲ.'

'ನಾನು ಮಾಡಬಾರದೆ?'

'ಅದಕ್ಕೆ ಯೋಗ್ಯತೆ ಬೇಕು.'

'ಅದನ್ನು ಸಂಪಾದಿಸುವೆ.'

'ಭರದ್ವಾಜರು ಶಾಂತರಾಗಿಯೇ ಮಗನ ಚಾಪಲ್ಯವನ್ನು ಅರಿತು ಹೇಳಿದರು-

'ಯವಕ್ರೀತ, ಜ್ಞಾನವು ಮತ್ಸರ ಪಟ್ಟು ಪಡೆಯುವೆನೆಂದರೆ ಸಿಗದ ವಸ್ತು. ರೈಭ್ಯರ ಅನುಗ್ರಹ ಪಡೆದರೆ ಅವರ ಯೋಗ್ಯತೆ ಬಂದೀತು.

'ಯವಕ್ರೀತನಿಗೆ ಅದೆಲ್ಲ ಮನಸ್ಸಿಗೆ ಹಿಡಿಯಲಿಲ್ಲ. ಆತ ತಂದೆಯನ್ನು ಕಾಡಿಸಿ ಪೀಡಿಸಿದ

''ರೈಭ್ಯರಂತೆ ಜನ ನಮ್ಮ ಬೆನ್ನು ಹತ್ತಲು ಏನು ಮಾಡಬೇಕು ಹೇಳಿರಿ?''

''ವೇದ ಪಾರಂಗತರಾಗಬೇಕು.''

'ಆಗುವೆ---''

''ಆಗುವೆನೆಂದರೆ ಸಾಧ್ಯವಿಲ್ಲ ಯವಕ್ರೀತ. ನಿನ್ನನ್ನು ಮೆಚ್ಚಿ ತನ್ನ ವಿದ್ಯೆಯನ್ನು ಧಾರೆ ಎರೆವ ಗುರು ನಿನಗೆ ಬೇಕು. ಅಲ್ಲದೆ, ವೇದದ ಗ್ರಹಣಕ್ಕೆ ನೀನು ಇನ್ನೂ ಪಾತ್ರನೇ ಇಲ್ಲ.''

'ಯವಕ್ರೀತನಿಗೆ ಇದೆಲ್ಲ ಬೇಕಾಗಿದ್ದಿಲ್ಲ. ಅವನಿಗೆ ಬೇಕಾಗಿದ್ದೇ ಬೇರೆ. ಅಂತೂ ಒಂದು ದಿನ ಮನೆ ಬಿಟ್ಟು ಹೋದ. ಎಲ್ಲೋ ಕಾಡಿನಲ್ಲಿ ನಿಂತು ಸಿದ್ಧಿಗಾಗಿ ತಪಸ್ಸು ಮಾಡಿದ. ಎಂತಹದೋ ಕ್ಷುದ್ರ ಸಿದ್ಧಿ ಸಂಪಾದಿಸಿದ. ಊರಿಗೆ ಬಂದು ಕಂಡವರನ್ನು ಕೆಣಕಿ ಅಪಮಾನ ಮಾಡ ಹತ್ತಿದ. ಭರದ್ವಾಜರು ಅವನಿಗೆ ಬೇಕಾದಷ್ಟು ಹೇಳಿದರು. ಆದರೆ ಸಿದ್ಧಿ ದೊರೆತುದು ಯವಕ್ರೀತನಿಗೆ ಮದ್ಯ ಕುಡಿದ ಹಾಗಾಯಿತು. ಒಂದು ದಿನ ನನ್ನ ತಂದೆಯನ್ನೇ ತಡೆದು ಅವಮಾನಿಸಿದ. ಆ ಸಮಾಚಾರವನ್ನು ತಂದೆಯವರು 'ಅಜ್ಞ' ಎಂದು ಅಲಕ್ಷಿಸಿದರು.

'ಭರದ್ವಾಜರಿಗೆ ಈ ಸಂಗತಿ ತಿಳಿದೊಡನೆ ಅವರು ಮಗನಿಗೆ ಬೇಕಾದಷ್ಟು ಹೇಳಿದರೂ ಪ್ರಯೋಜನವಾಗಲಿಲ್ಲ. ನಾನು ಊರಲ್ಲಿರಲಿಲ್ಲ. ಒಂದು ದಿನ ತಂದೆಯವರು ಕಾನನದಲ್ಲಿ ಸಮಿಧೆ ತರಲು ಹೋಗಿದ್ದರು. ಮನೆಯಲ್ಲಿ ನನ್ನ ಸೌಭಾಗ್ಯವತಿಯೊಬ್ಬಳೇ ಇದ್ದಳು. ಯವಕ್ರೀತನಿಗೆ ದುರ್ವಿಚಾರ ಬಂತು. ಆತ ಸಮಯ ಸಾಧಿಸಿ ಅವಳನ್ನು ಮಾತನಾಡಿಸಿದ. ಆದರೆ ಅವಳೋ ತುಂಬ ಅಭಿಮಾನದ ಸ್ತ್ರೀ. ಆದರೂ ವಿನೀತಳಾಗಿಯೆ ಇವನಿಗೆ ಹೊರಗೆ ಹೋಗೆಂದು

ಬಿನ್ನವಿಸಿಕೊಂಡಳು. ಆದರೆ ಈತನ ಕಣ್ಣು ನೆತ್ತಿಯ ಮೇಲೆ ಬಂದಿದ್ದವು. ವಿವೇಕ ಹೃದಯದಿಂದ ದೂರ ಓಡಿತ್ತು. ಅವಿವೇಕಿ ಮುಂದುವರಿದ. ಅವಳಮೇಲೆ ಕೈ ಮಾಡಿದ. ಪಾಪ, ಹೆಂಗಸು. ಆ ಉನ್ಮತ್ತ ಅವಿವೇಕಿ ಗಂಡಸು, ಹೌಹಾರಿದಳು. ಸಂರಕ್ಷಣೆಗೆ ಕೂಗಿದಳು. ಭರದ್ವಾಜರೂ ಮನೆಯಲ್ಲಿ ಇಲ್ಲವೆಂದು ಕಾಣುತ್ತದೆ. ಈ ಅವಿವೇಕಿ ಮತ್ತಷ್ಟೂ ನಿರಂಕುಶನಾದ. ಉನ್ಮತ್ತನಾದ ಅವನು ಪಶುವಿನಂತೆ ವ್ಯವಹರಿಸಿ ಪಲಾಯನ ಹೇಳಿದ.

ನನ್ನವಳು ಅಸ್ತವ್ಯಸ್ತಳಾಗಿ ಮೂರ್ಛೆ ಹೋಗಿ ಬಿದ್ದಿದ್ದಳು. ಅದೆಷ್ಟೋ ಸಮಯದ ನಂತರ ಅವಳು ಮೂರ್ಛೆ ತಿಳಿದು ಎಚ್ಚರಾಗಿ ಅಳುತ್ತ ಗೋಳಿಡುತ್ತಿರುವಾಗ ತಂದೆ ಬಂದರು. ಅವರು ಎಲ್ಲ ಕತೆಯನ್ನು ಕೇಳಿದರು. ಶಾಂತ ಶೀತಲವಾದ ಅವರು ಜ್ವಾಲಾಮುಖಿಯಂತೆ ಉರಿದೆದ್ದರು. ಅವರಿಗೆ ಅಷ್ಟು ವರುಷ ದಮನ ಮಾಡಿದ ಕೋಪ ಒಮ್ಮೆಲೆ ಭುಗಿಲೆಂದು ಉರಿದೆದ್ದಿತ್ತು. ಕೂಡಲೆ ಅವರು ಹೋಮ ಶಾಲೆಗೆ ಹೋದವರೆ ತಮ್ಮ ತಲೆಯಲ್ಲಿನ ಕೂದಲು ಕಿತ್ತು ಹೋಮ ಮಾಡಿದರು.

'ತಪಸ್ವಿಗಳು ಲೋಕ ಕಲ್ಯಾಣ ಮಾಡುವಂತೆ ಲೋಕ ಸಂಹಾರವನ್ನೂ ಪೂರೈಸಬಲ್ಲರು. ಹೋಮ ಪೂರೈಸಿ ಇನ್ನೂ ಎರಡುಗಳಿಗೆಯಾಗಿರಲಿಲ್ಲ. ಇಬ್ಬರು ಚಂಡಾಲರು ನಮ್ಮ ಅಂಗಳದಲ್ಲಿ ಬಂದು ನಿಂತರು. ಭೀಕರ ಆಕೃತಿಯ ಒಂದು ಗಂಡು ಹೆಗಲ ಮೇಲೆ ಇಟ್ಟ ಕೊಡಲಿಯನ್ನು ತಿರುಗಿಸುತ್ತ ತಂದೆಯವರ ಆಜ್ಞೆಗಾಗಿ ದಾರಿ ಕಾಯುತ್ತಿತ್ತು. ತಂಬುಲದುಟಿಯ ಒಯ್ಯಾರದ ಬೆಡಗಿನ ಚಂಡಾಲ ಕನ್ನಿಕೆಯೊಬ್ಬಳು ತನ್ನ ಕಾಲು ಗೆಜ್ಜೆಗಳನ್ನು ಸರಿಯಾಗಿ ಕಟ್ಟಿಕೊಳ್ಳುತ್ತ ನಿಂತಿದ್ದಳು.

'ತಂದೆಯುವರು ಅಂಗಳದ ತುದಿಗೆ ಬಂದು ಅವರಿಗೆ ಧತ್ತೂರ ಹೂವಿನೊಡನೆ ವೀಳ್ಯ ಕೊಟ್ಟು -

'ಹೋಗಿರಿ, ಈಗಲೆ ಯವಕ್ರೀತನ ಜೀವ ತೆಗೆದುಬನ್ನಿರಿ.......'

''ಚಂಡಾಲರು ಮರು ಮಾತನಾಡಲಿಲ್ಲ. ತಲೆ ಬಾಗಿಸಿ ವಂದಿಸಿದವರೇ ಹೊರಟು ಹೋದರು. ಚಂಡಾಲರು ತನ್ನ ಬೆನ್ನು ಹತ್ತಿ ಬರುತ್ತಿದ್ದುದನ್ನು ಕಂಡು ಯವಕ್ರೀತ ಓಡ ಹತ್ತಿದ. ಓಡಿ ದಣಿದ. ಒಂದು ಮರದ ಬುಡದಲ್ಲಿ ವಿಶ್ರಾಂತಿಗೆ ಕುಳಿತ. ಹೆಣ್ಣು ಮೇಲ್ವಾಯ್ದು ಯವಕ್ರೀತನ ಎದುರು ಬಂದು ಒಯ್ಯಾರದೊಡನೆ ಕುಣಿಯಹತ್ತಿದಾಗ ಆತನ ಬಾಯಲ್ಲಿ ನೀರೂರಿತು. ಆಸೆಗೊಂಡು ಅವಳ ಕೈ ಹಿಡಿಯ ಹೋದರೆ, ಕೂಡಲೆ ಆ ಚಂಡಾಲಿನಿ ಅವನ ಕೈಯನ್ನು ಬಲವಾಗಿ ಹಿಡಿದು ಕೂಗಿದಳು. ಚಂಡಾಲ ಓಡಿ ಬಂದು ಅವನ ಎದೆಯ ಮೇಲೆ ಕುಳಿತು ಕತ್ತು ಹಿಸುಕಿದ. ಯವಕ್ರೀತನ ಕೊನೆ ಹೀಗಾಯಿತು.''

'ಆ ದಿನ ಸಂಜೆಯೊಳಗಾಗಿ ಭರದ್ವಾಜರಿಗೆ ತಮ್ಮ ಮಗನ ದುರಂತ ಸಾವು ತಿಳಿಯಿತು. ಪಾಪ, ಆ ಸಾಧು ವಿಪ್ರನಿಗೆ ಮಗನ ಮೇಲೆ ಮೋಹ ಎಲ್ಲಿತ್ತೋ ಏನೋ. ಇದಕ್ಕೆಲ್ಲ ಕಾರಣರಾದ

ನನ್ನ ತಂದೆಯನ್ನು ಶಪಿಸಿದರು. ಒಂದು ದಿನ ನನ್ನ ತಂದೆ ಚಳಿ ಹತ್ತಿದೆ ಎಂದು ಪರ್ಣಶಾಲೆಯ ಮೂಲೆಯಲ್ಲಿ ವ್ಯಾಘ್ರಾಜಿನ ಹೊತ್ತುಕೊಂಡು ಕುಳಿತಾಗ ನಾನು ಹೊರಗಿನಿಂದ ಬಂದವನೆ ವ್ಯಾಘ್ರವೇ ಎಂದು ಬಾಣ ಪ್ರಯೋಗ ಮಾಡಿದೆ. ಪೂಜ್ಯ ತಂದೆ 'ಹಾ' ಎಂದವರೆ ನೆಲಕ್ಕೆ ಬಿದ್ದು ಅಸು ನೀಗಿದರು.....'

'ನನಗೆ ಇದೆಲ್ಲ ಅದ್ಭುತ ದುರಂತದ ಅಭಾಸವೆನ್ನಿಸಿತು. ಅಂದು ಸಿದ್ಧರ ಯೋಗ ಭೂಮಿಯಾಗಿದ್ದ ರೈಭ್ಯಾಶ್ರಮ ಇಂದು ಶ್ಮಶಾನವಾಗಿದೆ. ರೈಭ್ಯರನ್ನು ಶಪಿಸಿದ ದಿನವೇ ಭರದ್ವಾಜರು ಆಶ್ರಮ ಬಿಟ್ಟು ಹೋದವರು ಮರಳಲಿಲ್ಲ.'

ನಾನು ಪರಾವಸುಗೆ ಹೇಳಿದೆ. 'ಆಯಿತು; ನೀನು ಇನ್ನು ನಿನ್ನ ಸತಿಯೊಡನೆ ಶತದ್ರು ತೀರಕ್ಕೆ ಹೋಗಿ ತಂಗು. ಈ ಶರತ್ಕಾಲದಲ್ಲಿ ವಿಶ್ವಾವಸು ಮರಳಬಹುದು. ನಾನು ರೈಭ್ಯ ಹಾಗು ಭರದ್ವಾಜರಿಂದ ಸಂಕಲಿಸಬೇಕಾದ ಜ್ಞಾನ ಉಳಿದುಕೊಂಡಿತು'-

'ಭರದ್ವಾಜರು ಅತ್ರಿಋಷಿಗಳ ಆಶ್ರಮದಲ್ಲಿ ಇದ್ದಾರೆಂದು ಮೊನ್ನೆ ಇಲ್ಲಿಗೆ ಬಂದ ದ್ವಿಜರು ಹೇಳಿದರು.' ಆಯಿತು, ಎಂದಾದರೂ ಒಂದು ದಿನ ಮತ್ತೆ ಅವರನ್ನು ಕಾಣುವ ಯೋಗ ಬಂದೀತು. ಪರಾವಸು, ಮುನೀನಾಮಪಿ ಮತಿ ಭ್ರಮಃ' ಪಾಪ, ಭರದ್ವಾಜರು ಇನ್ನು ಮುಂದೆ ಪ್ರಚಂಡ ತೇಜಸ್ಸಿನಿಂದ ಬೆಳಗುವ ವ್ಯಕ್ತಿಯಾಗುವುದರಲ್ಲಿ ಶಂಕೆಯಿಲ್ಲ.'

ಮರು ದಿನ ನಾನು ಪರಾವಸುವಿನೊಡನೆ ಶತದ್ರು ತೀರದ ನಮ್ಮ ಆಶ್ರಮಕ್ಕೆ ಬಂದೆ.

# ಹತ್ತು ದಿಕ್ಕಿನಿಂದ ಕರೆಯುತ್ತಿರುವ ನೂರು ಕೆಲಸಗಳು

ಸಹಕಾರಿಗಳೆಲ್ಲ ಗಿರಿ-ನದಿಗಳನ್ನು ಸುತ್ತುತ್ತ, ತಮ್ಮ ಕೆಲಸದಲ್ಲಿ ನಿರತರಾಗಿದ್ದರು. ನಾನು ಆಶ್ರಮದಲ್ಲೇ ಆಸನಸ್ಥನಾಗಿ ವೇದಶೋಧನೆಯಲ್ಲಿ ತೊಡಗಿದ್ದೆ. ಒಮ್ಮೆ ಮಹರ್ಷಿ ಸೋಮಶ್ರವರು ಗಂಗಾ ತೀರದ ಸೋಮಯಾಗವೊಂದನ್ನು ಪೂರೈಸಿಕೊಂಡು ಆಶ್ರಮಕ್ಕೆ ಬಂದಿದ್ದರು.

ನಾನು ಅನೇಕ ವರುಷ ಅವರನ್ನು ಹುಡುಕಿ ಅಲೆದು ನಿರಾಶೆಗೊಂಡಿದ್ದೆ. ಇಂದು ಅವರು ನನ್ನ ಆಶ್ರಮಕ್ಕೆ ಬಂದಿದ್ದರಿಂದ ನನಗೆ ಅಮಿತಾನಂದವಾಗಿತ್ತು.

ಸೋಮಶ್ರವರು ಮಂತ್ರಾಂಗದಲ್ಲಿ ಪಾರಂಗತರು. ಅಲ್ಲದೆ ಅವರು ಹಲವು ಋಕ್‌ಗಳ ದ್ರಷ್ಟಾರರು. ಅವರಿಂದ ನನ್ನ ಸಂಶೋಧನೆಯಲ್ಲಿ ಅಪಾರ ಸಹಾಯ ಬೇಕಿತ್ತು. ಸಮಕಾಲೀನರಾದ ಪ್ರಶಸ್ತ ಆಕರರಾಗಿದ್ದರು ಅವರು.

ಸತ್ಕಾರದ ಬಳಿಕ ನಾನು ನನ್ನ ವಿಚಾರವನ್ನು, ಇದುವರೆಗೂ ವೇದ ಶೋಧನೆಯಲ್ಲಿ ಆದ ಕೆಲಸವನ್ನೂ ಅವರ ಮುಂದಿರಿಸಿದೆ. ಸೋಮಶ್ರವರಿಗೆ ಪರಮಾಶ್ಚರ್ಯವಾಯಿತು. ದ್ರಷ್ಟಾರರಿಗೆ ಹೊಳೆಯದ ಒಂದು ವೇದ ಸಮನ್ವಯದ ಕಾರ್ಯ ನನ್ನಿಂದ ನಡೆದಿತ್ತು. ಆಗಲಿತ್ತು. ಅವರು ನನ್ನ ಬೆನ್ನ ಮೇಲೆ ಕೈಯಿಟ್ಟರು.

''ಸ್ವಸ್ತಿ, ನಿನ್ನ ಕಾರ್ಯದಲ್ಲಿ ನಿನಗೆ ಬ್ರಹ್ಮಣಸ್ಪತಿಯ ನೆರವಿರಲಿ, ನೀನು ಬರಿ ಬಾದರಾಯಣನಲ್ಲ. ವ್ಯಾಸನು. ಕಾಲಾಂತರದಲ್ಲಿ ಇಂತಹ ವೇದ ಸಮನ್ವಯಕ್ಕಾಗಿ ಬ್ರಹ್ಮಣಸ್ಪತಿಯ ಸತ್ವ ಕೆಲಸ ಮಾಡುತ್ತದೆಂದು ಅಗಸ್ತ್ಯರು ನನಗೆ ಹೇಳಿದ್ದರು. ಈ ಮೊದಲೆ ಹಲವು ಜನ ವ್ಯಾಸರಾಗಿದ್ದಾರೆ. ಇಂದು ನನ್ನ ಕಣ್ಣು ಕೃತಕೃತ್ಯವಾದವು. ನಾನು ಬ್ರಹ್ಮಣಸ್ಪತಿಯನ್ನು ಕಂಡಾಗ ''ಅಪಶ್ಯಂ'' ಎಂದು ಹೇಳಿದ ಆತ್ಮ ನಿರ್ಭರತೆಯೆ ನಿನ್ನನ್ನು ಕಂಡಾಗಲೂ ಉಕ್ಕಿ ಬರುತ್ತಿದೆ.

''ಬಾದರಾಯಣನೆಂದು, ನಿನ್ನನ್ನು ನಾನು ಹಾಗೆ ಕರೆಯಲು ನನಗೆ ಮನಸ್ಸು ಬಾರದು. ನಾನು ನಿನ್ನನ್ನು ಕಂಡದ್ದು ವ್ಯಾಸನೆಂದು. ನಿನ್ನ ಮೊದಲಿನ ವ್ಯಾಸರೂ ಸಾಧಿಸದ ಅದ್ಭುತ

ಸಮನ್ವಯವನ್ನು ನೀನು ವೇದದಲ್ಲಿ ಸಾಧಿಸಿದ್ದೀ. ಇದೊ ತೆಗೆದುಕೋ! ಈ ಮಂತ್ರ ಮಾಲಿಕೆಯನ್ನು-''

ಎಂದು ಸೋಮಶ್ರವರು ಹದಿನಾರು ಮಂತ್ರಗಳ ಒಂದು ಗುಚ್ಛವನ್ನು ನನ್ನ ಕೈಗಿರಿಸಿದರು. ನನ್ನ ಹೃದಯದಲ್ಲಿ ಅದ್ಭುತ ಶಕ್ತಿ ಸಂಚಾರವಾಯಿತು. ನನ್ನ ಕಾರ್ಯ ತತ್ಪರತೆಯಲ್ಲಿ ಸಾವಿರ ಕೈಗಳು ನನ್ನ ಬಲಕ್ಕೆ ಬಂದು ನಿಂತವು.

ನಮ್ಮ ಆಶ್ರಮದಲ್ಲಿ ಸೋಮಶ್ರವರು ಒಂದು ಪಕ್ಷ ತಂಗಿದ್ದರು. ಅವರು ಹೊರಟು ನಿಂತಾಗ ಒಂದು ಮಾತು ಹೇಳಿದರು.

''ವ್ಯಾಸ, ವೇದವು 'ಜೀವ ಶಕ್ತಿ'ಯ ಸೊತ್ತಾಗಿದೆ. ಅದರ ಸತ್ವ ಮಾನವನಿಗೆ 'ಬುದ್ಧಿಶಕ್ತಿ' ಇದ್ದರೂ ವಿದಿತವಾಗಬೇಕು. ಅದು ಹೃದಯ ಗಮ್ಯವಾಗುವಂತೆ ಶಕ್ತಿ ಪಾತದಿಂದ ಇನ್ನೂ ಮಾನವನ ಹತ್ತಿರಕ್ಕೆ ಅದನ್ನು ತರುವ ಕಾರ್ಯವೂ ನಿನ್ನಿಂದಾಗಬೇಕು-''



ಸೋಮಶ್ರವರು ಹೊರಟು ಹೋದರು. ಅಂದಿನಿಂದ ಆಶ್ರಮವಾಸಿಗಳೆಲ್ಲ ನಾನು ನಿವಾರಿಸಿದರೂ ವ್ಯಾಸನೆಂದೇ ನನ್ನನ್ನು ಕರೆಯುತ್ತಿದ್ದರು. ಸೋಮಶ್ರವರು ಅಷ್ಟು ಪ್ರಭಾವ ಬೀರಿ ಹೋಗಿದ್ದರು.

ನಾನೊಮ್ಮೆ ನನ್ನ ಬಗ್ಗೆ ಚಿಂತಿಸಿದೆ-

ಕೃಷ್ಣ ಇದ್ದೆ-

ದ್ವೈಪಾಯನನಾದೆ-

ಬಾದರಾಯಣನೆನ್ನಿಸಿದೆ-

ಈಗ ವ್ಯಾಸನಾಗಿ ಮುಂದುವರಿದೆ.

ನನ್ನ ಬದುಕಿನಲ್ಲಿ ಇಂದು ಅದ್ಭುತ ಉತ್ಸಾಹ ತುಳುಕುತ್ತಿತ್ತು. ಅಲ್ಲದೆ ಅದನ್ನು ಋತದಲ್ಲಿ ಕಾಣುವ ಕೌಶಲವೂ ಪ್ರಚಂಡವಾಗಿಯೇ ಇತ್ತು. ನನ್ನ ಸಮಕಾಲೀನರಲ್ಲಿ ಈ ಸಾಮರ್ಥ್ಯ ಯಾರಲ್ಲಿತ್ತೋ ಇಲ್ಲವೋ ಗೊತ್ತಿಲ್ಲ. ಆದರೆ ಅದ್ವಿತೀಯವೆಂದೂ ಏಕಾಕಿಯಾಗಿರುವುದಿಲ್ಲ ಎಂಬುದೂ ನನ್ನ ಪರಮಾನುಭವ. ನನ್ನ ಸಹಕಾರಿಗಳ ಸಣ್ಣ ಕೆಲಸವೂ ನನ್ನಲ್ಲಿ ಕೈವಾರಿಯಾಗಿ ನನ್ನ ಶಕ್ತಿ ಎಂದು ಪರಿವರ್ತಿತವಾಗುತ್ತಿತ್ತು. ಜಗತ್ತಿನ ವ್ಯಕ್ತಿಯ ಒಂದು ಕೆಲಸವೂ ಐಶ್ವರ್ಯದ ಪ್ರಭಾವವೇ ಎಂಬುದು ನನಗೆ ಸ್ಪಷ್ಟವಾಯಿತು. ಹೀಗೆಯೇ ಹಲವು ವರುಷ ಉರುಳಿದವು. ಈ ಉನ್ನತ ವಿಚಾರದಲ್ಲಿ ನಾನಿರುವಾಗ ''ಬ್ರಹ್ಮಸೂತ್ರ''ಗಳನ್ನು ರಚಿಸಿದೆ. ವೇದದ ಅಧಿದೈವತವಾದವು ಬುದ್ಧಿಯ ಬಯಕೆಯಿಂದ ಆಧ್ಯಾತ್ಮದತ್ತ ಸಾಗಿತ್ತು. ಉಪನಿಷತ್ತಿನ ಋಷಿಗಳೆಲ್ಲ ಹಾಗೆ ದಾರಿ ಹಿಡಿದು ನಡೆದಿದ್ದರು. ಬಹುವಾದ ವೈದಿಕ ದೇವತೆಗಳೆಲ್ಲ 'ಬ್ರಹ್ಮೀಭೂತ'ರಾಗ ಹತ್ತಿದ್ದರು.

ನಾನು ನೂರು ಜನ ಋಷಿಗಳಲ್ಲಿಯ ಏಕಾಭಿಪ್ರಾಯವನ್ನು ಘೋಷಿಸಿದೆ, ಮುಂದುವರಿಸಿದೆ. ಬ್ರಹ್ಮ ಸೂತ್ರ ರಚನೆಯಲ್ಲಿ ನಾನಿರುವಾಗ ಒಂದು ದಿನ ನಾರದರು ಬಂದರು. ನಾನು ಹಾಗು ನಾರದರು ಲೋಕದ ಬಗ್ಗೆ ಬಹುವಾಗಿ ಮಾತನಾಡಿದೆವು.

ನಾರದರು 'ಬ್ರಹ್ಮ ಸೂತ್ರ'ವನ್ನು ನೋಡಿ ಒಂದು ನಿಟ್ಟುಸಿರೆಳೆದರು. ಅವರಿಗೆ ನಾನು ಈ ಕಾರ್ಯದಲ್ಲಿ ತೊಡಗಿದ್ದು ಮನಸ್ಸಿಗೆ ಬಂದಿರಲಿಲ್ಲ.

''ಕೃಷ್ಣದ್ವೈಪಾಯನ, ನಿನ್ನಿಂದ ನಾನು ಬ್ರಹ್ಮಸೂತ್ರವನ್ನು ಅಪೇಕ್ಷಿಸಿದ್ದಿಲ್ಲ. ಈ ಕೃತಿಯನ್ನು ಲೋಕ ಅದ್ಭುತವೆಂದು ಎತ್ತಿಕೊಂಡು ಕೊಂಡಾಡಿದರೂ ನಿನ್ನ ಎತ್ತರ ಅದಕ್ಕಿಂತ ಬಹು ದೂರವೆಂದು ಭಾವಿಸಿದೆ. ನಿನ್ನ ಎಲ್ಲ ಯತ್ನಗಳಲ್ಲಿ ನಾನು ಬಯಸಿದ ನಿನ್ನ ಶಕ್ತಿಯನ್ನು ಪೂರ್ಣವಾಗಿ ಕಾಣದೆ ಹೋಗಿದ್ದೇನೆ.

''ದ್ವೈಪಾಯನಾ, ನಿನ್ನಿಂದ ನಾನು ಬರಿ ಯತ್ನವನ್ನು ಅಪೇಕ್ಷಿಸಿದ್ದಿಲ್ಲ. ಲೀಲೆಯನ್ನು ಅಪೇಕ್ಷಿಸಿದ್ದೆ. ನೀನು ಯತ್ನದಲ್ಲಿರುವ ಮಾನವೀಯ ಅಶಕ್ತತೆಯನ್ನು ಕಳೆದು ಲೀಲಾಮೂರ್ತಿಯಾಗಿ ಬೆಳೆಯುವಿ ಎಂದು ಭಾವಿಸಿದ್ದೇನೆ''

ನಾರದರ ನುಡಿಗಳು ನನ್ನನು ಬಹುವಾಗಿ ಪೀಡಿಸಿದವು. ನನ್ನ ಕಾರ್ಯದ ವ್ಯಾಪ್ತಿ ಅವರ ಗಮನಕ್ಕೆ ಬಂದಿಲ್ಲವೆಂಬುದನ್ನು ತಿಳಿದು ಮತ್ತೆ ಹೇಳಿದೆ-

''ಭಗವನ್, ಬ್ರಹ್ಮ ಸೂತ್ರಕ್ಕೆ ಮಾತ್ರ ನನ್ನ ಕೆಲಸ ಮರ್ಯಾದಿತವಾಗಲಿಲ್ಲ. ಅದಕ್ಕಿಂತ ಹೆಚ್ಚಾಗಿ ನಾನು ವಿಶ್ವದ ಇತಿಹಾಸ ರಚನೆಯ ಮಹಾ ಸಿದ್ಧತೆಯಲ್ಲಿದ್ದೇನೆ. ಇತಿಹಾಸ ಇಲ್ಲದೆ ಜನಾಂಗ ಎಂದೂ ಅಭಿವೃದ್ಧಿ ಹೊಂದಲಾರದು. ಮಾನವ ಲೋಕದಲ್ಲಿ ಸತ್ವ ಅವತರಿಸಬೇಕಾದರೆ ಸಮೃದ್ಧಿ ಕಾಲೂರಬೇಕಾದರೆ ಅದರ ಇತಿಹಾಸ ಅದಕ್ಕೆ ತಿಳಿಯುವ ಅಗತ್ಯವಿದೆ ಎಂಬ ಮಾತನ್ನು ನನಗೆ ಕಣ್ವರು ಹೇಳಿದ್ದಾರೆ. ನನ್ನ ಸಹಕಾರಿಗಳು ದಿಕ್ಕುದಿಕ್ಕಿಗೆ ಚೆಲ್ಲಿರುವ ಇತಿಹಾಸದ ಸಂಕಲನಕ್ಕೆ ತೊಡಗಿದ್ದಾರೆ.

ಇನ್ನು ಕೆಲವು ವರುಷಗಳಲ್ಲಿಯೆ ನಿಮ್ಮ ಅನುಗ್ರಹದಿಂದ ನಾನು ಆ ಮಹಾ ಕಾರ್ಯದಲ್ಲಿ ಯಶಸ್ವಿಯಾಗುತ್ತೇನೆ.''

''ದ್ವೈಪಾಯನ, ಜಗತ್ತಿಗೆ ನೀನು ಈ ಇತಿಹಾಸಕ್ಕಿಂತಲೂ ಅದ್ಭುತವಾದ, ದಿವ್ಯವಾದ ಕಾಣಿಕೆ ನೀಡಬಲ್ಲೆ. ಇತಿಹಾಸವನ್ನು ನಿರ್ಮಿಸುವುದು ಚಿಕ್ಕ ಕಾರ್ಯವಲ್ಲದಿದ್ದರೂ ನಿನ್ನ ಶಕ್ತಿಗೆ ಅದು ತೀರ ಲಘುವಾದುದು. ನೀನು ಇತಿಹಾಸವನ್ನು ಬರೆಯಬಾರದು; ನಿರ್ಮಿಸಬೇಕು. ಇದು ನನ್ನ ಮನೀಷೆ''

''ಕ್ಷಮಿಸಬೇಕು ಭಗವನ್! ನಾನು ನನ್ನ ಜೀವನ ವಾಹಿನಿಯ ದಡಗಳನ್ನು ನಿಶ್ಚಯಿಸಿದ್ದೇನೆ. ಇಂದು ಜಗತ್ತಿಗೆ ಏನು ಅಗತ್ಯವಿದೆ ಎಂಬುದು ನನಗೆ ನಿಶ್ಚಯವಾಗಿದೆ.

ಪೂಜ್ಯರು ಈ ಬಾದರಾಯಣನನ್ನು ಅವನ ಮಾರ್ಗದಲ್ಲಿ ಮುಂದುವರಿಯಲು ಅನುಗ್ರಹಿಸಬೇಕು.''

''ನಿನ್ನಲ್ಲಿ ಅನುಗ್ರಹ ಯಾಚನೆಯ ಅಶಕ್ತತೆ ತೊಲಗಬೇಕು. ನಿನ್ನಿಂದ ಜಗತ್ತು ವಿಶ್ವ ಅನುಗ್ರಹೀತವಾಗಬೇಕು. ನೀನು ಮುನಿಯಾದರೆಸಾಲದು, ಅವರಿಗೆದ್ಯೇಯವೇ ಆಗಿರಬೇಕು.''

ನಾನು ನಾರದರ ಮಾತನ್ನು ವಿಹ್ವಲನಾಗಿ ಕೇಳುತ್ತಲಿದ್ದೆ.

'' ನಿನಗೆ ಒಂದು ಸಂಗತಿಯನ್ನು ಹೇಳುವೆ. ಬಳಿಕ ನಿನಗೆ ತೋಚಿದ್ದನ್ನು ನೀನು ಮಾಡು. ಆಗ ನಾನಿನ್ನೂ ನಾರದನಾಗಿದ್ದಿಲ್ಲ. ಸಾಮನ್ಯ ಋಷಿಯಾಗಿದ್ದೆ. ಗಂಗಾತೀರದ ನಮ್ಮ ತಪೋವನದಲ್ಲಿ ಇದ್ದಕ್ಕಿದ್ದಂತೆಯೆ ಒಮ್ಮೆ ದೇವತೆಗಳ ವಿಮಾನಗಳು ಬಂದಿಳಿದವು.

''ವಿಮಾನದಿಂದ ಇಳಿದ ದೇವತೆಗಳು, ಆಶ್ರಮ ಪದದ ಅಧ್ಯಕ್ಷರಾದ ದಧೀಚಿ ಋಷಿಗಳ ಪರ್ಣ ಶಾಲೆಯಲ್ಲಿ ಹೋಗಿ ಅವರನ್ನು ಅಭಿವಂದಿಸಿದರು.

''ದಧೀಚಿಗಳು, ದೇವತೆಗಳು ದಯಮಾಡಿಸಿದ್ದನ್ನು ಕಂಡು ಆದರದಿಂದ ಸ್ವಾಗತಿಸಿದರು. ದರ್ವಿಯಿಂದ ನವಾಭಿಷುತ ಸೋಮವನ್ನು ದೇವತೆಗಳಿಗೆ ನೀಡಿದರು.

''ದಧೀಚಿಗಳು ಬದ್ಧಾಂಜಲಿಗಳಾಗಿ ಅತಿಥಿಗಳನ್ನು ಕೇಳಿದರು -'ತಾವು ಇಲ್ಲಿಗೆ ದಯಮಾಡಿಸಿದ ಉದ್ದೇಶ ತಿಳಿದರೆ-ಕೃತಾರ್ಥ.

''ದೇವತೆಗಳು ಈ ಭಾಗಕ್ಕೆ ಸುಖ ಸಂಚಾರಕ್ಕೆ ಬಂದಿರಲಿಲ್ಲ. ಅವರು ಕಾರ್ಯಾರ್ಥವಾಗಿ ಬಂದಿದ್ದರು.

''ನಾವು ಮಹರ್ಷಿಗಳಾದ ತಮ್ಮಲ್ಲಿ ಯಾಚನೆಗಾಗಿ ಬಂದಿದ್ದೇವೆ.'' ದೇವವೃಂದದ ಧುರೀಣ ಹೇಳಿದ. ಆಶ್ರಮ ಪದಕ್ಕೆ ಬಂದವರನ್ನು ಆದರಿಸುವುದು ಋಷಿಧರ್ಮವಾಗಿತ್ತು. ಋಷಿ ಗಣಕ್ಕೆ ದರ್ಶನ ಕೊಟ್ಟರೇ ಭಾಗ್ಯ ಎನ್ನುವ ನೀವು ನಮ್ಮಿಂದ ಯಾಚಿಸುವುದೇನಿದೆ? ನಿಮ್ಮಿಂದ ಋಷಿ ಗಣ ಅನುಗ್ರಹವನ್ನೇ ಬೇಡುತ್ತದೆ.''

''ಅದೂ ಸತ್ಯವೇ. ಆದರೆ ಮಹರ್ಷಿಗಳಾದ ತಮ್ಮಲ್ಲಿ ನಾವು ನಿಜವಾಗಿಯೂ ಯಾಚನೆಗಾಗಿ ಬಂದಿದ್ದೇವೆ.''

''ದೇವತೆಗಳ ಮಾತನ್ನು ಋಷಿವರ ದಧೀಚಿಗಳು ಶಾಂತರಾಗಿ ಕೇಳಿದರು. ನಾನು ತಮಗೆ ಮಾಡುವುದೇನಿದೆ?''

''ಬಾದರಾಯಣ, ಆ ಕಾಲದಲ್ಲಿ ದೇವತೆಗಳ ದೇಶದಲ್ಲಿ ವೃತ್ರನ ಉಪಟಳ ಹೆಚ್ಚಾಗಿತ್ತು. ದೇವತೆಗಳು ಅಮರರಾಗಿರುವುದು ಅವರಿಗೆ ಶಾಪವಾಗಿ ಪರಿಣಮಿಸಿತ್ತು. ವೃತ್ರನ

ಪೀಡೆಯಿಂದ ಅವರು ಬೆಂಡಾಗಿದ್ದರು. ವೃತ್ರವಧೆಗಾಗಿ ಸ್ವರ್ಗದಲ್ಲಿ ಶಸ್ತ್ರ ನಿರ್ಮಾಣ ನಡೆದಿತ್ತು. ಆಗ ಸ್ವರ್ಗದ ವಿಜ್ಞಾನಿಗಳಾದ ತ್ರಿಶಿರಸ್ ಹೇಳಿದರು.

''ಭೂಮಿಯಲ್ಲಿ ತನ್ನ ಮೂಳೆ ಮೂಳೆಯಲ್ಲಿಯೂ ಪ್ರಚಂಡ ಸತ್ವ ಸಂಪಾದಿಸಿದ ವ್ಯಕ್ತಿಯೊಂದಿದೆ. ವೃತ್ರನ ವಿನಾಶಕ್ಕೆ ಅವನ ಬೆನ್ನು ಮೂಳೆಯ ವಸ್ತುವಿನಿಂದ ಅಸ್ತ್ರ ಸಿದ್ಧವಾಗಬೇಕು.''

''ದೇವತೆಗಳು ಅವರ ಮಾತಿನ ಮೇರೆಗೆ ಆಗ ದಧೀಚಿ ಋಷಿಯ ಹತ್ತಿರ ಮೂಳೆ ಭಿಕ್ಷೆಗಾಗಿ ಬಂದಿದ್ದರು.

''ತನ್ನ ಜನಕ್ಕೆ ನಿತ್ಯ ಉಪಕಾರಿಗಳಾದ ದೇವತೆಗಳ ಮೈ ಮೇಲೆ ಬಂದ ಪ್ರಸಂಗದಲ್ಲಿ ತಾನೂ ಕೊಡಬೇಕೆಂದು ದಧೀಚಿಗಳು ಯೋಗಾರೂಢರಾಗಿ ಬೆನ್ನುಮೂಳೆ ಕೊಟ್ಟರು.

''ಬಾದರಾಯಣ, ದಧೀಚಿಗಳ ಬೆನ್ನುಮೂಳೆಯಲ್ಲಿ ದೇವತೆಗಳಿಗೆ ಉಪಕಾರ ಮಾಡುವ ಸತ್ವವಿತ್ತು. ನಿನ್ನಲ್ಲಿ ನಾನು ಅವರಿಗಿಂತ ಮಹಾಮಹಿಮೆಯನ್ನು ಕಂಡಿದ್ದೇನೆ. ದೇವತೆಗಳೂ ನಿನ್ನ ಇತಿಹಾಸ ಬರೆಯುವ ಸತ್ವ ಸಂಪಾದಿಸು. ನೀನು ದೇವತೆಗಳ ಇತಿಹಾಸ ಹೇಳುವುದು ದೊಡ್ಡ ಮಾತಲ್ಲ.

ನಾರದರು ಹೊರಟು ಹೋದ ಬಳಿಕ ನನ್ನ ಮನಸ್ಸನ್ನೆಲ್ಲ ಅವರ ಹೇಳಿಕೆ ವ್ಯಾಪಿಸಿತ್ತು.

''ದೇವತೆಗಳೂ ನಿನ್ನ ಇತಿಹಾಸ ಬರೆಯುವ ಸತ್ವ ಸಂಪಾದಿಸು.''

ನಾರದರ ವಾಣಿ.

ನಮಗೆ ಇತಿಹಾಸದ ಸಂಕಲನವಾಗಬೇಕು!

ಎಂಬುದು ಕಣ್ವರ ಆದೇಶ.

ಅಂದು ಗುರುಕುಲದಿಂದ ಹೊರ ಬೀಳುವ ಮುಂದೆ ಹೇಳಿದ ಈ ಮಾತು ಮನಸ್ಸಿನಲ್ಲಿ ನಾಟಿತ್ತು. ಕಣ್ವರು ನನ್ನ ಶಕ್ತಿಯನ್ನು ಅಳೆಯದೆ ಹೇಳಿದರೆ............?

ನಾರದರಿಗೆ ಈಗ ನಾನು ವಹಿಸಿಕೊಂಡ ಕಾರ್ಯ ವಿರೋಧವೆ? ಮತ್ತೆ, ಹಗ್ಗದಾಟ ಆರಂಭವಾಯಿತು. ಆದರೆ ನಾರದರು ನಿಜವಾಗಿಯೂ ನನ್ನ ಶಕ್ತಿಯನ್ನು ಅರಿತು ಹೇಳಿರಬೇಕು.

ಕಣ್ವರು ಹೇಳಿದ್ದು ಸಾಮಾನ್ಯ ಸ್ನಾತಕರು ಮಾಡುವ ಕಾರ್ಯವಾಗಿತ್ತು.

ನಾರದರ ಅಪೇಕ್ಷೆ ಬಾದರಾಯಣನಲ್ಲಿಯೇ ಇತ್ತು. ನಾನು ಮಾಡುವೆನೆಂದು ತಾವು ತಿಳಿದುಕೊಂಡ ಕಾರ್ಯವನ್ನು ಬಾದರಾಯಣನಲ್ಲದವನು ಮಾಡಲಾರ, ಬಾದಾರಾಯಣನೇ ಅಂತಹ ಸತ್ವಶಾಲಿ ಎಂದು ನಾರದರ ಹೇಳಿಕೆ.

ನಾನು ಅಷ್ಟು ಸತ್ವಶಾಲಿಯೆ?

ಈ ಶಂಕೆ ನನಗೇ ಬಂದರೆ ನನ್ನ ಸತ್ವಕ್ಕೆ ಏನು ಅರ್ಥ?

ಗುರುಕುಲದಿಂದ ಹೊರಟ ಸ್ನಾತಕನೊಬ್ಬ ಸಾಹಸದಿಂದ, ಸಾತತ್ಯದಿಂದ ಸಾಧಿಸಬಲ್ಲ ಕೆಲಸವನ್ನು ಕಣ್ವರು ಹೇಳಿದರು.

ನಾರದರು ಕಂಡ ಸತ್ವ ಅನನ್ಯವಾದುದು.

ಹಲವು ಜನ ಋಷಿಗಳಿದ್ದರು. ದೇವತೆಗಳ ಆಯುಧಕ್ಕೆ ಒದಗುವ ಸತ್ವ ದಧೀಚಿಗಳೊಬ್ಬರ ಬೆನ್ನು ಮೂಳೆಯಲ್ಲಿ ಮಾತ್ರ ಇತ್ತು!

ನಾರದರು ನನ್ನ ಸತ್ವವನ್ನು ನನಗೆ ತಿಳಿಸಿದರು. ಒಂದೆರಡು ಸಂದರ್ಭದಲ್ಲಿ ಅವರು ಸ್ಪಷ್ಟವಾಗಿ ನನಗೆ ಹೇಳಿದ್ದರು. ''ನೀನು ನೆಲದ ಮೇಲಿನ ಹತ್ತು ಸಮಸ್ತರಲ್ಲಿ ಒಬ್ಬನಲ್ಲ. ಸ್ವರ್ಗದಿಂದ ನಾರಾಯಣ ತನ್ನ ಕೆಲಸಕ್ಕಾಗಿ ನೆಲಕ್ಕೆ ಬಂದು ದ್ವೈಪಾಯನನಾಗಿದ್ದಾನೆ ಎಂಬುದು ನನಗೆ ಗೊತ್ತು. ನಿನಗೆ ಗೊತ್ತಾಗಬೇಕು!''

ದಿನಗಳು ಹೀಗೆಯೇ ಉರುಳಿದವು. ಒಂದು ದಿನ ತಂದೆಯವರು ಇದ್ದಕ್ಕಿದ್ದಂತೆಯೆ ನಾನು ನಿಂತ ಆಶ್ರಮ ಪದಕ್ಕೆ ದಯಮಾಡಿಸಿದರು. ನನ್ನ ಸಹಕಾರಿಗಳಿಗೆ ಹಾಗು ಆಶ್ರಮದ ಅನೇಕ ತಪಸ್ವಿಗಳಿಗೆ ಬಹಳ ಸಂತೋಷವಾಗಿತ್ತು.

ಈ ಆಶ್ರಮದಲ್ಲಿಯೆ ಅವರು ಜ್ಯೋತಿಷದ ಬಗ್ಗೆ ಅನೇಕ ಋಷಿಗಳಿಗೆ ಹೊಸ ಸತ್ಯವನ್ನು ಹೇಳಿದರು. ಒಂದು ದಿನ ಅವರು ನನ್ನ ಹತ್ತಿರ ಬಂದು ''ದ್ವೈಪಾಯನ, ನಾನು ನಿನಗಾಗಿಯೆ ಇಲ್ಲಿಯವರೆಗೆ ಬಂದಿದ್ದೇನೆ'' ಎಂದರು.

ನಾನು ವಿನಯದಿಂದ ''ನನ್ನ ಕರ್ತವ್ಯವೇನು ಆದೇಶಿಸಬೇಕು'' ಎಂದು ಕೇಳಿಕೊಂಡೆ.

''ಈಗ ಕರ್ತವ್ಯ ನಿನ್ನದಿಲ್ಲ ನನ್ನದಿದೆ'' ಎಂದು ತಂದೆಯವರು ತಾವು ಬಂದ ಉದ್ದೇಶವನ್ನು ಹೇಳಿದರು. ಅವರಿಗೆ ನಿರಂತರ ಸಮಾಧಿಯ ಅಪೇಕ್ಷೆಯಾಗಿತ್ತು. ತಾವು ಮಾಡಬೇಕೆನಿಸಿದ ಕೆಲಸಗಳನ್ನೆಲ್ಲ ಮಾಡಿದ ಸಮಾಧಾನವಾಗಿತ್ತು. ಆದರೂ ಅವರಲ್ಲಿದ್ದ ಅಮಿತ ತಪಃಶಕ್ತಿ ಹಾಗು ಪ್ರಚಂಡ ಆಯುಷ್ಯಗಳನ್ನು ನನಗೆ ಧಾರೆ ಎರೆದು ಕೊಡಲು ಬಂದಿದ್ದರು.

ಜ್ಯೋತಿಷವು ವೇದಾಂಗ ಸತ್ಯವೆಂಬುದು ತಂದೆಯವರ ಪ್ರಭಾವಿ ಸಿದ್ಧಾಂತ. ಅವರು ಕಾಲದ ವಿಷಯದಲ್ಲಿ ಬಹಳ ಚಿಕಿತ್ಸಕರು. ಅನೇಕ ಸಮಯಗಳು ಮಾತ್ರ ಪರಮಾತ್ಮ ಸಂಕಲವನ್ನು ಕ್ರಿಯಾಶೀಲ ಗೊಳಿಸುತ್ತವೆ ಎಂಬುದು ಅವರ ಧೋರಣೆ.

ಅಂಥದೊಂದು ಪ್ರಶಸ್ತ ಸಮಯದಲ್ಲಿ ನನ್ನನ್ನು ಅವರು ಕರೆದು ತಮ್ಮ ತಪೋ ಬಲವನ್ನು ನನಗಿತ್ತರು. ತಮ್ಮ ಶೇಷಾಯುಷವನ್ನೆಲ್ಲ ನನಗೆ ಧಾರೆ ಎರೆದರು. ಕೊನೆಯಲ್ಲಿ ನನ್ನನ್ನು ಹರಸುತ್ತ ಅವರು ಹೇಳಿದರು.

''ವಿಶ್ವವು ಬದುಕಿದವರೆಗೂ ನೀನು ಬಾಳುತ್ತೀ. ಲೋಕವೆ ನಿನಗೆ ಚಿರಂಜೀವತ್ವವನ್ನು ಕರುಣಿಸಿದೆ. ಜಗತ್ತು ಬದುಕಿರುವರೆಗೆ ನಿನ್ನ ಆಯುಷ್ಯವಿರುವುದು-''

ನನ್ನ ತಂದೆಯವರ ಶಕ್ತಿಪಾತದಿಂದ ನನ್ನ ಜೀವಕ್ಕೆ ಹೊಸ ಉತ್ಸಾಹ ಬಂತು. ಹತ್ತು ದಿಕ್ಕಿನಿಂದ ಕರೆಯುತ್ತಿರುವ ನೂರು ಕೆಲಸಗಳಿಗೆ ನನಗೆ ಸಾವಿರ ಕೈಗಳಾದರೂ ಸಾಲದಾಗಿತ್ತು.





# ಹಸ್ತಿನಾವತಿಯ ರಾಜಮಾತೆ

ಶತದ್ರು ತೀರದಿಂದ ನಾನು ಶಮ್ಯಾಶ್ರಮಕ್ಕೆ ಬಂದು ನಿಂತು ಬಹಳ ದಿನಗಳಾಗಿದ್ದವು. ನಾರದರ ಆದೇಶದ ಮೇರೆಗೆ ಭೂಮಿಯ ಹಲವಾರು ರಾಜರನ್ನು ನಾವು ಸ್ವರ್ಗಕ್ಕೆ ಕಳಿಸುವ ಕಾರ್ಯ ಮಾಡಬೇಕಿತ್ತು. ಈ ಕಾರ್ಯದಲ್ಲಿ ನಮಗೆ ನಿಜವಾಗಿಯೂ ಉಪಕಾರ ಮಾಡಿದವರು ಸೋಮಶ್ರವಸ್. ಸಮಗ್ರ ಭಾರತದಲ್ಲಿ ನಾವು ಮೊದಲು ಐದು ಜನ ಚಕ್ರವರ್ತಿಗಳನ್ನು ದೇವಲೋಕದ ಪ್ರಯಾಣಕ್ಕಾಗಿ ವಿನಂತಿಸಿಕೊಂಡೆವು.

ನಮ್ಮ ಸಮ್ರಾಟರು ಕೆಲವು ದಿನವಾದರೂ ಸ್ವರ್ಗದಲ್ಲಿದ್ದು ಬಂದರೆ ಭೂಮಿಯ ಮೇಲೆ ಬೆಳೆಯುತ್ತಿರುವ ಈ ದ್ವೇಷ, ಭಯಗಳು ಕಡಿಮೆಯಾಗುವುದಾಗಿ ನಾರದರು ಭಾವಿಸಿದ್ದರು. ಸ್ವರ್ಗದವರಿಗೂ ಭೂಮಿಪುತ್ರರ ಬಗ್ಗೆ ನಾರದರು ಹಲವು ವೈಶಿಷ್ಟ್ಯಗಳನ್ನು ಹೇಳಿದ್ದರು.

ನೆಲದವರ ಅನ್ನದ ಮೇಲೆಯೆ ಸ್ವರ್ಗ ಬದುಕಿತ್ತು. ಸ್ವರ್ಗವು ಅಮೃತದಿಂದ ತುಂಬಿದ್ದರೂ ಭೂಮಿಯ ಮಕ್ಕಳು ಕೊಡುವ ಹವಿಸ್ಸು ಅವರಿಗೆ ಜೀವನದಾಯಿಯಾಗಿತ್ತು. ಅಲ್ಲದೆ ದೇವಲೋಕಕ್ಕೆ ಭೂಮಿಯು ಇನ್ನೂ ಹಲವು ವಿಧದ ಅಗತ್ಯಗಳನ್ನು ಒದಗಿಸುತ್ತಿತ್ತು. ನಾರದರ ಸತತ ಪರಿಶ್ರಮದಿಂದ ನೂರು ಅಶ್ವಮೇಧಯಾಗ ಮಾಡಿದವರಿಗೆ ಇಂದ್ರ ಪದವಿ ಸಿಗುವಂತಾಗಿತ್ತು. ಆದರೆ ಅನೇಕ ಅಧಿಕಾರಪ್ರಿಯ ಇಂದ್ರರು, ಇಲ್ಲವೆ ಇಂದ್ರನ ಅಭಿಮಾನಿ ಪರಿವಾರದವರು ಕೆಲವು ಚಕ್ರವರ್ತಿಗಳ ಯಜ್ಞ ಭಂಗ ಮಾಡಿದ್ದುಂಟು.

ಭೂಮಿಯಲ್ಲಿ ಸ್ವರ್ಗದ ಗದ್ದುಗೆಯನ್ನೇರುವ ಅಧಿಕಾರ ದಾಹದಿಂದಲೇ ಕೆಲವು ಚಕ್ರವರ್ತಿಗಳು ಯಜ್ಞ ಮಾಡುತ್ತಾರೆ ಎಂದು ದೇವತೆಗಳ ವಿರೋಧಿಗಳಾದ ಶುಕ್ರಾಚಾರ್ಯರು ಕಿಂವದಂತಿಯನ್ನು ಹುಟ್ಟಿಸಿದರು. ಆದರೆ ನಾವು ಮೊದಲ ಸಲ ಆಯ್ಕೆ ಮಾಡಿದ ಚಕ್ರವರ್ತಿಗಳಲ್ಲಿ ಆ ಅಭಿಲಾಷೆ ಲೇಶವೂ ಇರಲಿಲ್ಲ. ಆದರೆ ಸ್ವರ್ಗದ ಸತ್ವ ತಡೆದುಕೊಳ್ಳುವ ಯೋಗ್ಯತೆ ಅವರಲ್ಲಿ ಇತ್ತೊ, ಇಲ್ಲವೋ ಎಂಬುದು ಖಚಿತವಾಗಲಿಲ್ಲ.

ಅಲ್ಪಾವಧಿಯ ದೇವಲೋಕ ಸಂಚಾರ ಮಾಡಿ ಬಂದವರು ಭೂಮಿಗೆ ಸಾಕಷ್ಟು ಉಪಕಾರ ಮಾಡಲಿಲ್ಲವೆಂದು ಅನೇಕ ಋಷಿಗಳು ದೂರಿದರೂ ಸ್ವರ್ಗ ಪ್ರಯಾಣ, ಪ್ರತ್ಯಾಗಮನಗಳಿಂದ ಭೂಮಿಯ ಸಂಸ್ಕೃತಿಯಲ್ಲಿ ಸ್ವರ್ಗದ ಹಲವು ಮೌಲ್ಯಗಳು ಬಳುವಳಿಯಾಗಿ ಬಂದವು.

ನಾರದರಿಗೆ ನಮ್ಮ ಅಭಿಲಾಷೆಯನ್ನು ನಾವು ಸ್ಪಷ್ಟವಾಗಿ ತಿಳಿಸಿದೆವು. ಸ್ವರ್ಗದವರು, ಭೂಮಿಗೆ ಆಗಾಗ ಬರುವುದರಿಂದ ಇಲ್ಲಿಯ ಜನಕ್ಕೆ ಅವರ ಬಗ್ಗೆ ಆದರಾಭಿಮಾನ ಭಕ್ತಿ ಶ್ರದ್ಧೆಗಳೂ ಬೆಳೆಯುತ್ತವೆ.

ಇಷ್ಟು ದಿನಗಳವರೆಗೆ ನೆಲದಲ್ಲಿ ಅವ್ಯವಸ್ಥೆಯಾದರೆ, ನೆಲದ ಜೀವನ ನಡೆಯದೆ ನಿಂತರೆ ಸ್ವರ್ಗದವರು ಸಹಾಯಕ್ಕಾಗಿ, ಇಲ್ಲವೆ ಸೈನಿಕ ಕ್ರಮಕ್ಕಾಗಿ ಮಾತ್ರ ಬರುವುದು ರೂಢಿಯಾಗಿತ್ತು. ಆದರೆ ನಮ್ಮ ಚಕ್ರವರ್ತಿಗಳು ಅಲ್ಲಿಗೆ ಹೋಗಿ ಬಂದಂದಿನಿಂದ ಹಾಗೂ ನಾರದರ ಪ್ರಯತ್ನದ ಫಲವಾಗಿಯೂ ಈ ಕ್ರಮ ಬದಲಾಯಿತು.

ಕಳೆದಸಲ ನಾರದರು, ಮಹರ್ಷಿ ಕರ್ದಮರನ್ನು ಸ್ವರ್ಗಕ್ಕೆ ಕರೆದುಕೊಂಡು ಹೋಗಿದ್ದರು. ಅಲ್ಲದೆ ಸ್ವರ್ಗದಿಂದ ಇಂದ್ರ, ಅವನ ಪರಿವಾರದವರು ಹಿಮಗಿರಿಯಲ್ಲಿ ನಡೆದ ವಾಜಪೇಯಕ್ಕೆ ಬಂದಿದ್ದರು. ಈ ಸಂಕ್ರಮಣದಲ್ಲಿ ಕೆಲವು ಹೇಯ ಘಟನೆಗಳೂ ನಡೆದವು. ಅವು ನಡೆಯ ಬೇಕಾಗಿದ್ದವು . ಯುದ್ಧದಲ್ಲಿ ನೂರು ಜನ ಸೈನಿಕರು ಸತ್ತರೂ ವಿಜಯ ಸಾಧಿಸಿದ ಸೇನಾಪತಿಗೆ ಕೀರ್ತಿ ಕಿರೀಟ ಲಭ್ಯವೇ. ಸತ್ತ ಸೈನಿಕರ ಬದುಕು ವ್ಯರ್ಥವಲ್ಲ. ಜಯವು ಸೋಲುಗಳ ಮೆಟ್ಟಲು ಏರಿ ಹೋಗಬೇಕಾದುದು ಅನಿವಾರ್ಯ.

27393

ನಾನು ಸಾಕಷ್ಟು ಹೊಸ ಉತ್ಸಾಹದಿಂದ ನಿರತನಾಗಿದ್ದೆ. ನನಗೀಗ ತಂದೆಯವರ ಶಕ್ತಿಪಾತದಿಂದ ಮುಪ್ಪಿನ ಭಯವಿರಲಿಲ್ಲ; ವರುಷ ವರುಷಕ್ಕೂ ನಾನು ಹತ್ತುಮಡಿ ಹೊಸ ಉತ್ಸಾಹದಿಂದ ಕುಣಿಯುತ್ತಿದ್ದೆ.

ಮೂರು ಪೂರ್ಣಿಮೆಗಳ ಏಕಾಂತವಾಸದಿಂದ ನಾನು ಅಂದೇ ಹೊರಗೆ ಬಂದಿದ್ದೆ. ಅಧ್ವರ್ಯುವಾದ ಬಲಾಕಿ ಈ ಅವಧಿಯಲ್ಲಿಯ ಪ್ರಧಾನ ಘಟನೆಗಳನ್ನೆಲ್ಲ ನಿರೂಪಿಸಿದ. ನಾನು ಅವುಗಳನ್ನು ಕುರಿತು ಚಿಂತಿಸುತ್ತಿದ್ದೆ.

'ಹಸ್ತಿನಾವತಿಯಿಂದ ರಾಜದೂತನೊಬ್ಬ ಬಂದಿದ್ದಾನೆ, ಮೂರು ದಿನ ಆಯಿತು. ತಮ್ಮನ್ನು ಕಂಡು ಹೋಗಬೇಕೆಂದು ತಂಗಿದ್ದಾನೆ.'

ನಾನು ಬಲಾಕಿಗೆ ಕೇಳಿದೆ 'ಹಸ್ತಿನಾವತಿಯ ರಾಜನು ಯಾರು?' ಬಲಾಕಿಯು ನೋಡಿ ಹೇಳಿದ 'ಶಂತನು ಕುಮಾರನಾದ ವಿಚಿತ್ರವೀರ್ಯ.'

ಬಹಳ ದಿನಗಳ ಹಿಂದೆಯೇ ನಾರದರು ಹೇಳಿದ್ದರು. 'ಇನ್ನು ಮುಂದೆ ಹಸ್ತಿನಾವತಿಗೆ ಭಾರತದ ಕೇಂದ್ರವಾಗುವ ಯೋಗ್ಯತೆ ಬರುತ್ತದೆ. ಪ್ರಸಂಗ ಬಂದಾಗ ಹಸ್ತಿನಾವತಿಯ ಸಂಬಂಧ ವಿಸ್ತರಿಸುತ್ತ ಹೋಗುವುದು ಲೇಸು' ಎಂದು. ಇಂದು ಹಸ್ತಿನಾವತಿಯ ರಾಜರಿಗೆ ನಮ್ಮ ಅಗತ್ಯ ಎನ್ನಿಸಿತು. ಈಗಲೂ ಅನ್ನಿಸದಿದ್ದರೂ ಸರಿ. ಒಂದು ದಿನ ಅವರ ಕಿರೀಟ ಈ ಆಶ್ರಮ ಭೂಮಿಯನ್ನು ಚುಂಬಿಸಲೇಬೇಕು. ಪಾಪ, ಹಸ್ತಿನಾವತಿಯ ಚಕ್ರವರ್ತಿ ಏಕೆ, ಭಾರತದ ಯಾವ

ಪ್ರಜೆಯನ್ನೂ ಈ ಗುಡಿಸಲು ಆಕರ್ಷಿಸಬೇಕು. ಅವರ ಕೃತಜ್ಞತೆ, ಭಕ್ತಿಗಳು ಇಲ್ಲಿ ಸಮರ್ಪಿತವಾಗಬೇಕು.

ಅವರ ಅಭ್ಯುದಯ ಕ್ಷೇಮಗಳಿಗೆ ಇಲ್ಲಿಂದ ಆಶ್ವಾಸನೆ, ರಕ್ಷಣೆಗಳು ದೊರೆಯಬೇಕು. ಭಾರತದ ಸಮಸ್ತ ರಾಜರಿಗೂ ಈ ಆಶ್ರಮ ವಂದ್ಯವಾಗಲೇಬೇಕು. ಆಶ್ರಮವೂ ಅವರ ಬಾಹುಗಳಲ್ಲಿ ಅಕ್ಷಯಬಲ ನೀಡಿ, ಹೃದಯದಲ್ಲಿ ವಿವೇಕವನ್ನು ನಿಧಾನಿಸಬೇಕು. ಇದು ಆಶ್ರಮದ ಕಾರ್ಯ ಎಂದು ನನಗೆ ನಿಚ್ಚಳವಾಗಿ ಹೊಳೆದಿತ್ತು.

ಬಲಾಕಿಗೆ ಆ ರಾಜ ದೂತನನ್ನು ಬರಮಾಡಲು ಹೇಳಿ, ಉಳಿದ ಘಟನೆಗಳ ಸಿಂಹಾವಲೋಕನದಲ್ಲಿ ತೊಡಗಿದ್ದೆ. ಬಲಾಕಿ ರಾಜದೂತವನ್ನು ಕಳಿಸಿ ಕಾರ್ಯಾಂತರಕ್ಕೆ ಹೊರಟು ಹೋದ. ದೂತ ಪ್ರಣಾಮಮಾಡಿ ಅತ್ಯಂತ ವಿನಯದಿಂದ ಬಿನ್ನವಿಸಿಕೊಂಡ:

'ಹಸ್ತಿನಾವತಿದಿಂದ ತಮ್ಮ ಸೇವೆವಾಗಿ ಹದಿನಾಲ್ಕು ಹಸುಗಳನ್ನು, ಏಳು ಕುಂಭ ಗೋಘೃತವನ್ನೂ ಕಳಿಸಿದ್ದಾರೆ. ಅಂಗೀಕರಿಸಬೇಕೆಂದು ಚಕ್ರವರ್ತಿಗಳೂ ರಾಜ ಮಾತೆಯವರೂ ಬಿನ್ನವಿಸಿದ್ದಾರೆ.....'

'ಹಸ್ತಿನಾವತಿಯ ರಾಜ್ಯಕ್ಕೆ ಕಲ್ಯಾಣವಾಗಲಿ. ಈಗ ರಾಜ್ಯದಿಂದ ಬಂದ ಸಮಾಚಾರವೇನು?'

27393

ದೂತ ಮತ್ತೊಮ್ಮೆ ಪ್ರಣಾಮ ಸಲ್ಲಿಸಿ 'ಹಸ್ತಿನಾವತಿಯ ರಾಜಮಾತೆಯವರಾದ ಸತ್ಯವತೀ ದೇವಿಯವರು ರಾಜಧಾನಿಗೆ ತಾವು ದಯಮಾಡಿಸುವಂತೆ ಬಹುವಾಗಿ ಪ್ರಾರ್ಥನೆ ಮಾಡಿಕೊಂಡಿದ್ದಾರೆ.'

ನಾನು ಚಕಿತನಾದೆ. ಹಸ್ತಿನಾವತಿಯ ಸಂಬಂಧ ಆಶ್ರಮ ಕಟ್ಟಿದ ಬಳಿಕ ಎಂದೂ ಬರಲಿಲ್ಲ. ಅಲ್ಲದೆ ಆಶ್ರಮದ ಜತೆಗೆ ಇಲ್ಲವೆ ಅದರ ಸದಸ್ಯರಾದ ನಮ್ಮ ಜತೆಗೆ ಅನೇಕ ರಾಜರು ಚಕ್ರವರ್ತಿಗಳು ಸಂಬಂಧ ಬೆಳೆಸಿದ್ದರೂ ನಮಗೆ ಹಸ್ತಿನಾವತಿ ಇನ್ನೂ ಹೊಸತಾಗಿಯೆ ಉಳಿದಿತ್ತು.

ಇಂತಹ ಅಪರಿಚಿತ ದೇಶದ - ಅದೂ ರಾಜನಾದವ ಅಲ್ಲ- ಒಂದು ಸಾಮ್ರಾಜ್ಯದ ರಾಜಮಾತೆ ನನ್ನ ಆಗಮನವನ್ನು ಅಪೇಕ್ಷಿಸಿದ್ದಾಳೆ. ಏಕೆ ?

ನನಗೆ ಕೆಲಹೊತ್ತು ಯೋಚಿಸಿದರೂ ಯಾವ ಸಂದರ್ಭವೂ ಹತ್ತಲಿಲ್ಲ. ಆದರೂ ದೂತನನ್ನು ನಾನು ಕೇಳಿದೆ: 'ನನ್ನನ್ನೇ? ರಾಜಧಾನಿಗೆ ಬರಬೇಕೆಂದು ಹೇಳಿದ್ದಾರೆಯೆ?'

'ಪೂಜ್ಯರಾದ ತಾವೇ ಚಿತ್ತೈಸಬೇಕೆಂದು ಕೋರಿದ್ದಾರೆ.'

'ಯಾರು ?'

'ನಮ್ಮ ರಾಜಮಾತೆಯವರು.'

ಮತ್ತೆ ನನಗೆ ಅದರ ಹಿನ್ನೆಲೆ ಹೊಳೆಯಲಿಲ್ಲ. ಸಾಮಾನ್ಯವಾಗಿ ರಾಜರಾಗಲಿ, ಇತರರಾಗಲಿ ಆಶ್ರಮಗಳನ್ನು ನೆನೆಯುವುದು ಎಂತಹದೋ ಪ್ರಸಂಗ ಮೈಮೇಲೆ ಇದೆ ಎಂದು. ಆಶ್ರಮದ ಇತಿಹಾಸದಲ್ಲಿಯೇ ರಾಣಿಯವರು ಆಶ್ರಮ ಬಯಸಿ ಬಂದುದು ಉಂಟೆ ?

ಇತ್ತು. ವಿಶಾಲಾ, ಗಾಂಧಾರದ ರಾಣಿಯೆ ಅಲ್ಲವೆ? ಅವಳಿಗೆ ಆಶ್ರಮದ ಅಗತ್ಯವೆನ್ನಿಸಿತು. ಆದರೆ - ರಾಜ ಗಾಂಭೀರ್ಯದಲ್ಲಿ ಅವಳು ಆಶ್ರಮವೇ ಗಾಂಧಾರಕ್ಕೆ ಬರಬೇಕೆಂದು ಬಯಸಲಿಲ್ಲ. ಗಾಂಧಾರ ದೇಶದ ಪ್ರಜೆಗಳ ಹೃದಯವನ್ನೇ ತನ್ನ ಹೃದಯದಲ್ಲಿ ಅವಳು ಹೊತ್ತು ತಂದಿದ್ದಳು. ಏಕಾಕಿಯಾಗಿ ವಿರಥಳಾಗಿ ಆಶ್ರಮಕ್ಕೆ ಬಂದಳು. ತಾನು ರಾಜಮಹಿಷಿ ಎಂಬುದನ್ನು ಮರೆತು ಆಶ್ರಮ ವಾಸಿಯಾಗಿ ಇಲ್ಲಿ ನಿಂತಳು. ಅವಳು ಆಶ್ರಮದಿಂದ ಏನನ್ನೂ ಬೇಡಲಿಲ್ಲ. ತನ್ನ ಸರ್ವಸ್ವವನ್ನೂ, ಸಾಲದ್ದಕ್ಕೆ ತನ್ನನ್ನೂ ಆಶ್ರಮಕ್ಕೆ ಅರ್ಪಿಸಿಕೊಂಡುಬಿಟ್ಟಳು. ಇಂದು ನಮ್ಮ ಶತದ್ರು ತೀರದ ಆಶ್ರಮವೆಲ್ಲ ಅವಳ ಸೂತ್ರದಿಂದ ನಡೆಯುತ್ತಿದೆ.

ಆದರೆ? ಹಸ್ತಿನಾವತಿಯ ರಾಜಮಾತೆ- ಪಾಪ ಅವಳೊಬ್ಬಳೇ ಏಕೆ? ಯಾವ ಕ್ಷತ್ರಿಯನ ಹೆಂಡತಿಯೂ ಅಷ್ಟೆ. ದುಃಖದ ಸೆಳವಿನಲ್ಲಿ ಕೊಚ್ಚಿಕೊಂಡು ಹೋಗುವಾಗ ತಮ್ಮ ಸೈನ್ಯ, ಸಂಪತ್ತು, ಸಿಂಹಾಸನ ಯಾವುದೂ ತಮ್ಮನ್ನು ರಕ್ಷಿಸಲಾರದೆಂದಾಗ ನಮ್ಮ ಕಡೆಗೆ ನೋಡುವರು....

ನಿಜ; ನೋಡಬಾರದೆ? ಖಂಡಿತ ನೋಡಬೇಕು. ಅವರು ಇಲ್ಲಿ ಒಂದು ಸಹಾಯದ ಆಶ್ವಾಸನೆ ಇದೆ ಎಂಬ ವಿಶ್ವಾಸ ತಳೆದವರಲ್ಲವೆ? ಇದಕ್ಕೂ ಹೆಚ್ಚಿನ ವಿವೇಕ ಅವರಿಗೆ ಇರುವುದು ಅಗತ್ಯವಿದ್ದರೂ ಈಗ ಇರುವ ಇಷ್ಟು ಭಾವನೆ ಅವಿವೇಕದ್ದಲ್ಲ. ಹೆಣ್ಣು ಜೀವಕ್ಕೆ ಗಂಡಿಗಿಂತಲೂ ಸಾವಿರ ಸಂಕಟ, ನೂರು ಬಂಡೆಗೆ ತನ್ನ ನಾವೆ ತಾಗಿದರೂ ಆಳದ ಅರಿವಿಲ್ಲದ ಗಂಡಿಗೆ ಬರದ ವಿವೇಕ - ನಾರಿಯರಿಗೆ ಬರುತ್ತದೆ.

ಎದುರು ರಾಜದೂತನಿದ್ದುದು ಒಂದು ಕ್ಷಣ ಮರೆತು ಹೋಯಿತು. ನಾನು ಸುಮ್ಮನೆ ಇದ್ದುದನ್ನು ಕಂಡು ದೂತ ಆತುರಗೊಂಡು ಮುಂದೆ ಹೇಳಿದ.

'ತಾವು ದಯಮಾಡಿಸುವುದು ಅಸಾಧ್ಯವೇ ಆದರೆ ಮಹಾರಾಣಿಯವರು ತಾವೇ ಆಶ್ರಮಪದಕ್ಕೆ ಬರುವುದಾಗಿಯೂ ಹೇಳಿದ್ದಾರೆ.'

ಮಹಾರಾಣಿ ನಡೆದು ನಮ್ಮ ಆಶ್ರಮಕ್ಕೆ ಬರಬೇಕು?

ಕ್ಷತ್ರಿಯರು ತಲೆಬಾಗಬೇಕು, ಮೈ ಮಣಿಯಬೇಕು. ಜಂಭ ಬಿಡಬೇಕು.

ಈ ಹಟ ನಮ್ಮ ಹೃದಯದಲ್ಲಿ ಕುಣಿದರೆ - ನಾವೂ ಕ್ಷತ್ರಿಯರೇ ಸರಿ. ಆಗ ನಮ್ಮ ವಿಷಯದಲ್ಲಿಯೂ ಇಂತಹದೇ ಅಭಿಪ್ರಾಯ ಉಂಟಾಗುವದು. ಮಹಾರಾಣಿ ಇಲ್ಲಿಗೆ ಏಕೆ ಬರಬೇಕು ?

ಕ್ಷತ್ರಿಯರು ಮದಾಂಧರೆಂದೇ?

ಇನ್ನೊಬ್ಬರನ್ನು ಹಾಗೆ ಭಾವಿಸುವುದು ಯೋಗ್ಯವೇ?

ಇರುವುದನ್ನು ಇರುವ ಹಾಗೆ ಹೇಳಕೂಡದೆ?

ಮತ್ತೆ ವಿಚಾರ ಚಕ್ರ ತಿರುಗಹತ್ತಿತ್ತು. ದೇಶ ಕ್ಷತ್ರಿಯರನ್ನೇ ಮುಂದೆ ಮಾಡಿಕೊಂಡು ಹೊಸ ಹಾದಿ ತುಳಿಯ ಬೇಕು. ಇದು ಅನಿವಾರ್ಯ. ಎಲ್ಲ ಕ್ಷತ್ರಿಯರು ಅವಿವೇಕಿಗಳೇ?

ಬಹುಜನ ಹಾಗಿದ್ದಾರೆ-

ಏಕೆ?

ಸಂಪತ್ತು ಇವರಿಗೆ ಉನ್ಮತ್ತತೆಯನ್ನು ತಂದಿದೆ. ಹಾಗಾದರೆ ಸಂಪತ್ತು ಮದ್ಯವೇ? ಅಲ್ಲ; ಅದು ಐಶ್ವರ್ಯ.

'ಅದರ ಸೇವನೆಯಿಂದ ಮನುಷ್ಯ ಮತ್ತನಾಗುವನೇ?'

'ಇಲ್ಲ- ಸಂಪತ್ತಿನ ಮೂಲಕವೇ ಯಜ್ಞ ಜರುಗುವದಿಲ್ಲವೆ? ಯಜ್ಞಕ್ಕೆ ಸಂಪತ್ತು ಬೇಕೇಬೇಕು-'

'ಯಜ್ಞವಿಲ್ಲದ ಸಂಪತ್ತು -'

'ನಿಜ; ಅದು ನಿಜವಾಗಿಯೂ ಹಳಸಿದ್ದು ಮಲೆತದ್ದು. ಅನಾರೋಗ್ಯವಾದದ್ದು. ಅದು ಮಾದಕ.'

'ದೇಶಕ್ಕೆ ಕ್ಷತ್ರಿಯರು ಬೇಕು.'

ಅವರ ತಲೆ ತಿರುಗದಂತೆ ಬೆನ್ನಹಿಂದೆ ಬಲ ಬೇಕು.'

ನನ್ನ ತಲೆಯಲ್ಲಿ ಮತ್ತೆ ವಿಚಾರಗಳು ಹಿಂಡುಗಟ್ಟಿ ನುಗ್ಗಿದವು. ಹಸ್ತಿನಾವತಿಗೆ ನಾನು ಹೋಗುವ, ಇಲ್ಲವೆ ಬಿಡುವ ನಿರ್ಣಯ ಇನ್ನೂ ನನ್ನ ಮನಸ್ಸಿನಲ್ಲಿ ಆಗಲಿಲ್ಲ. ದೂತನಿಗೆ ಹೇಳಿದೆ- 'ನಾಳೆ ಒಂದು ದಿವಸ ಇಲ್ಲಿ ಪೂರ್ತಿ ತಂಗು, ಆಚೆಯ ಬೆಳಗಿನಲ್ಲಿ ನನ್ನ ನಿರ್ಧಾರವನ್ನು ನಿನಗೆ ತಿಳಿಸುತ್ತೇನೆ.'

ನನಗೆ ಆಶ್ರಮ ಬಿಟ್ಟು ಹೋಗಬೇಕಾದರೂ ಕೆಲ ವಿಧಿಗಳನ್ನು ಅನುಸರಿಸಬೇಕಾಗಿತ್ತು.

ರಾಜದೂತ ಹೇಳಿದ-'ಪ್ರಯಾಣಕ್ಕೆ ಅರಮನೆಯಿಂದ ಸಿದ್ಧವಾದ ಹೊಚ್ಚ ಹೊಸ ರಥವಿದೆ...'

ತಾವು ಕುಳಿತ ಓಡಾಡುವ ರಥವನ್ನು ರಾಜರು ತಪಸ್ವಿಗಳಿಗೆ ಕಳಿಸುತ್ತಿರಲಿಲ್ಲ. ಪೂಜ್ಯರಿಗಾಗಿ ಪ್ರತ್ಯೇಕ ರಥದ ವ್ಯವಸ್ಥೆ ಇರುತ್ತಿತ್ತು. ರಾಜಭವನದಲ್ಲಿ ಋಷಿಗಳಿಗೆ, ತಪಸ್ವಿಗಳಿಗೆ, ಪುರೋಹಿತರಿಗಾಗಿ ರಥಗಳಿರುತ್ತಿದ್ದವು.

ನಾನು ಹಸ್ತಿನಾವತಿ ತಲುಪಿದೆ. ವಿಚಿತ್ರವೀರ್ಯ ಹಾಗು ಅವನ ಪರಿವಾರದವರು ಅದ್ಭುತ ಸ್ವಾಗತವಿತ್ತರು. ನಗರದ ಸಮೀಪದ ಉಪವನದಲ್ಲಿರುವ ಅರಮನೆಯ ಯಜ್ಞಶಾಲೆಯಲ್ಲಿ ನನಗೆ ತಂಗುವ ವ್ಯವಸ್ಥೆಯಾಗಿತ್ತು. ಮಹಾರಾಜನಾದ ವಿಚಿತ್ರವೀರ್ಯ ಹಾಗೂ ಅವನ ಮಂತ್ರಿಗಳ ಜತೆಗೆ ನಾನು ರಾಜ್ಯದ ಯೋಗಕ್ಷೇಮ ಕುರಿತು ಮಾತನಾಡಿದೆ. ರಾಜ್ಯಕ್ಕೆ ಆಚಾರ್ಯ ಗರ್ಗರು, ಮಹಾಮನರಾದ ಧೌಮ್ಯರು ಮಾರ್ಗದರ್ಶಕರಾಗಿರುವರೆಂದು ಅವನ ಪ್ರಧಾನ ಸಚಿವ ತಿಳಿಸಿದ. ಅನಂತರ ನಾನು ಧೌಮ್ಯರನ್ನು ಕಂಡು ಹಲವು ಸಂಗತಿಗಳ ಬಗ್ಗೆ ಚಿಂತಿಸಿದೆ.

ಮಧ್ಯಾಹ್ನದ ನಂತರ ನಾನು ನಿವಾಸದಲ್ಲಿ ತಂಗಿದ್ದಾಗ ಪರಿಚಾರಕನು ಬಂದು ಕೇಳಿದ.

'ರಾಜಮಾತೆಯವರು ದಯಮಾಡಿಸಿದ್ದಾರೆ. ಒಳಗೆ ಬರಲು ಅನುಮತಿಗಾಗಿ ಕಾದಿದ್ದಾರೆ...'

ನಾನು-'ಅಗತ್ಯವಾಗಿ ಬರಲು ಹೇಳು' ಎಂದೆ.

ನಾನು ರಾಜಮಾತೆಯನ್ನು ನೋಡಿದೆ. ಸಾವಿರಾರು ಆಶ್ಚರ್ಯಗಳು ತಾಕಲಾಡಿ ನನ್ನ ಕಣ್ಣುಗಳ ಮೇಲೆ ನನಗೆ ಅವಿಶ್ವಾಸ ಹೇಳಿದವು. ರಾಜಮಾತೆ ನನ್ನ ಸಂಶಯವನ್ನು ದೃಢಪಡಿಸಿದಳು. ಒಂದು ಕ್ಷಣ ನನ್ನನ್ನು ಅಡಿಯಿಂದ ಮುಡಿಯವರೆಗೆ ನೋಡುತ್ತ ನಿಂತಳು.

ನಾನೂ ಬೆರಗುಗೊಂಡು ನೋಡಿದೆ- ಅವಳು ರಾಜಮಾತೆ ಮಾತ್ರವಾಗಿರದೆ-ನನ್ನ ತಾಯಿಯಾಗಿದ್ದಳು-ನಾನು ಸಂಗತಿಗಳ ಗೊಂದಲದಲ್ಲಿ ಬಿದ್ದು ನಿರ್ಣಯಕ್ಕೆ ಬರದೆ ತೊನೆದಾಡುತ್ತಿರುವುದನ್ನು ತಾಯಿ ಕಂಡು -



'ಯಾಕೆ- ನಾನು ಯಾರೆಂಬುದನ್ನು ಇನ್ನೂ ನಿಶ್ಚಯಿಸಲಾರದವನಾಗಿದ್ದೀಯಾ?'

ನನ್ನ ಸಂಶಯ ಪೂರ್ತಿ ನಿವಾರಣೆಯಾಗಿತ್ತು. ನಾನು ಓಡಿ ಹೋಗಿ ನನ್ನ ತಾಯಿಯ ಪಾದಗಳಲ್ಲಿ ಹಣೆಯಿಟ್ಟು ನಮಸ್ಕರಿಸಿದೆ. ನನ್ನನ್ನು ಮೇಲೆತ್ತಿ ತಾಯಿ ಹೇಳಿದಳು.

''ನೀನು ದೇಶಕ್ಕೆ ದೊಡ್ಡ ಋಷಿಯಾಗಿದ್ದರೂ ನನಗೆ ಮಗ........''

ನನ್ನ ಶಂಕೆ ಪೂರ್ತಿ ನಿವಾರಣೆಯಾಗಿತ್ತು. ನನಗೆ ನೆನಪಿದೆ -ಇಂದಿಗೆ ಇಪ್ಪತ್ತು ವರುಷಗಳಿಗೂ ಹಿಂದೆ ಒಂದು ದಿನ ನಾರದರೊಡನೆ ತಾಯಿ ಗುರುಕುಲಕ್ಕೆ ಆಗಮಿಸಿದ್ದಳು. ಆದರೆ ಅನುಭವಗಳಲ್ಲಿ ಎಷ್ಟು ಅಂತರ! ನನ್ನ ಜೀವ ಆ ದಿನ ತಾಯಿಯನ್ನು ಕಂಡಾಗ ಪಟ್ಟ ಆನಂದ ಮೇರೆ ಮೀರಿದ್ದು. ಆದರೆ ಇಂದು...... ನಾನು ವಿಚಾರಿಸಿದೆ-'

ಬರೀ ಆಶ್ಚರ್ಯ-

ಹಸ್ತಿನಾವತಿಯ ರಾಜಮಾತೆ ನನ್ನ ತಾಯಿ ಎಂಬ ಸ್ಮೃತಿ ಉಳಿದಿತ್ತು. ಆದರೆ ಅಂದು

ಬದರರ ಗುರುಕುಲ ಮಾತ್ರದರ್ಶನದಿಂದ ನನಗಾದ ಆವೇಗ- ಕಾತರತೆಗಳೊಡನೆ ಆದ ಆನಂದದ ಉಕ್ಕು ಇಂದು ಇಲ್ಲ.

ಏಕೆ-

ಮನಸ್ಸೇ ಅಷ್ಟು, ತಟಸ್ಥತೆಯ ಕಡೆಗೆ ಅಂಟಿಕೊಂಡಿದೆ. ಪ್ರವಾಹಿಯಾದ ಅದು ಈಗ ಘನವಾಗಿತ್ತು. ತಾಯಿಗೆ ನಾನು ನಮಸ್ಕಾರ ಮಾಡಿದ್ದೆ. ಮುಂದೆ ಮುನ್ನೂರ ಯೋಜನ ಓಡಿದ್ದರೂ ಸಂಸ್ಕಾರಗಳು ಪ್ರಬಲಿಸಿ ಒಮ್ಮೆಲೆ ನನ್ನನ್ನು ಎಳೆತಂದವು. ಆದರೆ ಈ ಸಂಸ್ಕಾರಕ್ಕೆ ಅಂದು ಗುರುಕುಲದಲ್ಲಿ ಅನುಭವಿಸಿದ ಅವಸ್ಥೆಯನ್ನು ಪುನ: ನನ್ನ ಮೇಲೆ ಹೇರುವಷ್ಟು ಬಲವಿರಲಿಲ್ಲ.

ಇಂದಿನವರೆಗೂ ನನ್ನ ಹೃದಯ ಇಂತಹ ಇಕ್ಕಟ್ಟಿನಲ್ಲಿ ಸಿಕ್ಕಿರಲಿಲ್ಲ. ನನ್ನ ಅವಸ್ಥೆಯನ್ನು ನೋಡಿ ನನ್ನ ತಾಯಿ ಒಂದು ನಿಮಿಷ ಅಧೀರಳಾದಳು. ಕಂಬನಿ ತುಂಬಿದಳು. ನನ್ನ ಮನದುಯ್ಯಾಲೆಯನ್ನು ಅವಳು ಗಮನಿಸಿರಬೇಕು.

'ಒಳಗೆ ನಡೆ.........'

27393

ನಾನು ತಾಯಿಯನ್ನು ಅನುಸರಿಸಿ ಒಳಗೆ ಹೋದೆ. ಅಲ್ಲಿ ವಿಸ್ತರಿಸಿದ ಒಂದು ವ್ಯಾಘ್ರಾಸನದ ಮೇಲೆ ಕುಳಿತುಕೊಂಡೆ. ತಾಯಿಯೂ ಹತ್ತಿರ ಕುಳಿತಳು. ಅವಳ ಮುಖದಲ್ಲಿಯ ಉದ್ವೇಗ-ನನ್ನ ಮನಸ್ಸಿನ ಉದ್ವೇಗದೊಡನೆ ಸ್ಪರ್ಧೆಯಾಡುತ್ತಿತ್ತು.

''ನಿನಗೆ ಆಶ್ಚರ್ಯವಾಗಿರಬೇಕು. ನಾನು ಹಸ್ತಿನಾವತಿಯ ಮಹಾರಾಣಿಯಾಗಿದ್ದೇನೆಂದು.''

ನಾನು ಏನೂ ಮಾತನಾಡದೆ ಸುಮ್ಮನಿದ್ದೆ. ತಾಯಿಯೂ ಒಂದು ಕ್ಷಣ ಸುಮ್ಮನಿದ್ದಳು.

'ನಿನ್ನ ತಾಯಿಯಾದ ನಾನು, ಮತ್ತೆ ಮದುವೆಯಾಗಿ ರಾಜಮಾತೆ ಎಂದು ನಿನ್ನಿದಿರು ನಿಂತುದು ನಿನಗೆ ಸರಿ ಎನಿಸಲಿಲ್ಲ ಅಲ್ಲವೆ?'

ತಾಯಿಯ ಮಾತಿನಲ್ಲಿ ಸಾಕಷ್ಟು ಕಾವಿತ್ತು. ಅವಳ ಮಾತಿನ ಕೆಮ್ಮಿಂಚು ನನ್ನನ್ನು ಕಂಗೆಡಿಸಿತು. ನಾನು ಕಕ್ಕಾವಿಕ್ಕಿಯಾಗಿ ಸುತ್ತಲೂ ನೋಡಿದೆ.

ನನಗೆ ಹತ್ತಾರು ವರುಷಗಳ ತಪಸ್ಸಿನ ಪ್ರಚಂಡ ಬೆಂಬಲವಿತ್ತು. ಮನಸ್ಸನ್ನು ಎಲ್ಲಿ ಬೇಕಲ್ಲಿ ಎಷ್ಟು ಬೇಕಷ್ಟು ಕೇಂದ್ರೀಕರಿಸುವ ಬಲ ಇತ್ತು. ಆದರೆ ಇಂದು ನನ್ನ ಸ್ಥಿತಿ, ಗಾಳಿಯ ಬಯಲಲ್ಲಿಟ್ಟ ಹಣತೆಯಾಗಿತ್ತು. ಎದುರಿಗಿದ್ದವಳು ತಾಯಿ, ಅದೂ ನನ್ನ ತಾಯಿ ಎಂಬ ಭಾವನೆಯಿತ್ತು. ಈ ಆಸಕ್ತಿಯಲ್ಲಿ ನನಗೆ ನನ್ನ ಯಾವ ಶಕ್ತಿಯೂ ನೆರವಿಗೆ ನಿಲ್ಲದೆ ಹೋಗಿತ್ತು.

ನನ್ನ ತಾಯಿಗೊಂದು ಮದುವೆ

ಮಗನಾಗಿ ಬೆಳೆದವನ ಹೃದಯಕ್ಕೆ ಈ ವಾರ್ತೆ ಏನು ಪರಿಣಾಮ ಮಾಡೀತು? ಒಂದು ಕ್ಷಣ ನನ್ನ ರಕ್ತಕ್ಕೆ ಅಂಟಿಕೊಂಡ ಈ ಕೆಸರಿನಿಂದ ನೆತ್ತರು ಕಾದು ಹೋಯಿತು. ಆದರೆ ಮರುಕ್ಷಣದಲ್ಲಿ ನನಗೆ ನನ್ನ ಜೀವನದ ಅರಿವಾಯಿತು. ಒಮ್ಮೆ ಈ ರಕ್ತದ ಕೆಸರಿನಿಂದ ಕಿತ್ತುಕೊಂಡು ಹೋಗಿದ್ದೇನೆ. ಮತ್ತೇಕೆ ಅದರ ಒಳಿತು ಕೆಡುಕಿನ ಗೊಡವೆ?

ತಾಯಿಯ ಕೃತಿ ತಂದೆಗೆ ಅವಮಾನವಲ್ಲವೆ? ತನ್ನ ಮನೆತನಕ್ಕೆ ಅಗೌರವವಲ್ಲವೆ?

ಇರಬಹುದು- ತನ್ನ ತಂದೆ ಗೃಹಸ್ಥಾಶ್ರಮಿಯಾಗಿ ಮನೆ ಕಟ್ಟಿಕೊಂಡು ಬಾಳುವ ಒಬ್ಬ ಸಾಮಾಜಿಕ ಪ್ರಾಣಿಯಾಗಿದ್ದರೆ? ನನ್ನ ತಾಯಿ, ತಂದೆಗೆ ವಂಚನೆ ಮಾಡಿದಂತೆ. ತಾನು ಪ್ರವೇಶ ಮಾಡಿದ ಮನೆಗೆ ಅಗೌರವ ತಂದಂತೆ.

ಆದರೆ- ತಂದೆ ಸಾಮಾಜಿಕ ಜೀವಿಯಾಗಿ ನಿಂತ ಗೃಹಸ್ಥನಲ್ಲ. ಅವನು ಋಷಿ. ಪರಮ ಋಷಿ. ಲೋಕದ ನ್ಯಾಯ ನೀತಿಗಳ ನಿರ್ಬಂಧವನ್ನು ದಾಟಿದ ಮಹಾತ್ಮ. ಅವರ ಮಾತು ಬೇರೆ-

ತಂದೆ ಮಹಾತ್ಮನಾಗಿ ಬಾಳಿರಲಿ, ಆದರೆ........

ತಾಯಿ ಲೋಕದ ಹೆಂಗಸೇ ಅಲ್ಲವೆ?

ಅವಳು ತಂದೆಯನ್ನು ನಂಬಿಕೊಂಡಿರಬೇಡವೆ?

ತಾಯಿ ಲೋಕದ ಹೆಂಗಸೇ ನಿಜ. ತಂದೆಯ ಮಟ್ಟಕ್ಕೆ ಏರದವಳೆಂದೇ ಅವಳು ತನಗೆ ಉಚಿತವಾದುದನ್ನು ಮಾಡಿದಳು.

ನಾನು ಬಹಳ ಜಂಜಡದಲ್ಲಿ ಸಿಕ್ಕಿದ್ದನ್ನು ಕಂಡು ತಾಯಿ ಅತ್ಯಂತ ಸಮಾಧಾನದಿಂದ ಹೇಳಿದಳು.

''ನಿನ್ನ ತಂದೆಯವರು ಮಹಾತ್ಮರು. ನನ್ನ ಪೂರ್ವದ ಪುಣ್ಯವೂ ದೊಡ್ಡದಿತ್ತು. ಯಾವ ಜನ್ಮದ ಸುಕೃತದಿಂದಲೋ ಅವರು ಅಂದು ಹೊಳೆ ಹಾಯಲು ಬಂದಿದ್ದರು. ನನ್ನಂತಹ ನೂರು ಜನ ತರುಣಿಯರು ಮಾಲ ಹಿಡಿದು ಸಾಲುಗೊಂಡು ನಿಂತರೂ ನಿನ್ನ ತಂದೆ ಕಣ್ಣೆತ್ತಿ ನೋಡಲಾರರು. ಆದರೆ ಅಂದು ನನ್ನ ಭಾಗ್ಯದ ಬಾಗಿಲು ತೆರೆದಿತ್ತು. ಅವರ ಸಂಗಮವಾಯಿತು. ನನಗೆ ಆಗ ಒಂದೂ ಗೊತ್ತಿರಲಿಲ್ಲ. ಅದೆಲ್ಲ ಪ್ರಾಯದ ಆಟವೆಂದು ತಿಳಿದಿದ್ದೆ. ಅಂತೆಯೇ ನಿನ್ನ ತಂದೆ ಆದಿನ ಅಗಲಿ ಹೋಗುವಾಗ ನಾನು ತುಂಬ ಬೇಜಾರುಗೊಂಡೆ. ಸಾಮಾನ್ಯ ಗಂಡು, ಹೆಣ್ಣಿನ ವಿಷಯದಲ್ಲಿ ತೋರುವ ನಿರ್ದಯತೆಯನ್ನೆ ನಿನ್ನ ತಂದೆ ನನ್ನಲ್ಲಿ ಆಡಿದರು ಎಂದುಕೊಂಡಿದ್ದೆ...

''ಆದರೆ - ಕಾಲಾಂತರದಲ್ಲಿ ನಾರದರು ಸಿಕ್ಕಾಗ ನನಗೆಲ್ಲ ನನ್ನ ಭಾಗ್ಯದ ಕಲ್ಪನೆ ಬಂತು. ಆಗ ನಿನ್ನ ತಂದೆಯ ಮಹಿಮೆಯನ್ನು ಹಲವು ಸಲ ಹಾಡಿದೆ. ನಾನು ನಾರದರನ್ನು

ಪೀಡಿಸಿದೆ-ನಿನ್ನನ್ನು ತೋರಿಸಿರಿ ಎಂದು. ಪರಮ ಕರುಣಾಳುವಾದ ಅವರು ಈ ಅಬಲೆಯ ಮೇಲೆ ಕೃಪೆಮಾಡಿ ಅಂದು ಆಚಾರ್ಯ ಬದರರ ಆಶ್ರಮಕ್ಕೆ ಕರೆದು ತಂದಿದ್ದರು.

''ಮುಂದೆ ಸಂವತ್ಸರದ ಆಚೆಯ ಒಂದು ದಿನ ನಿನ್ನ ತಂದೆ ನನಗೆ ಹೇಳಿದರು.

'ಮತ್ಸ್ಯಗಂಧಿ- ಇದು ನಿನ್ನ ತಂದೆ ನನ್ನನ್ನು ಪ್ರೀತಿಯಿಂದ ಕರೆಯುವ ಹೆಸರು. ಲೋಕದ ಹುಡುಗಿಯರ ಹಾಗೆ ನೀನೂ ಕನ್ಯೆ.....

'ಹಾಗೇಕೆ ಹೇಳಿದಿರಿ?'

ಎಂದು ನಾನು ಕಂಬನಿಗರೆಯುತ್ತ ಕೇಳಿದೆ- ನನಗೆ ಅವರ ಮಾತು ಬಹಳ ನಿಷ್ಠುರವೆನ್ನಿಸಿತು. ಆ ಮಾತು ತಡೆಯದೆ ಅವರ ಪಾದದಲ್ಲಿ ಬಿದ್ದು ಹೊರಳಾಡಿದೆ - ಅವರು ಏನೇನೋ ಹೇಳಿದರು - ನನಗೊಂದೂ ತಿಳಿಯಲಿಲ್ಲ. ನಾರದರು ಕಂಡ ಬಳಿಕ ನನಗೆ ತಿಳಿಯಿತು-

''ನಾನು ನಿನ್ನ ತಂದೆಯ ಮಿಲನವೊಂದು ಪ್ರಾಯದಾಟ ಎಂದು ಬಗೆದಿದ್ದೆ. ಆದರೆ ನಾರದರು ನನ್ನ ಕಣ್ಣು ತೆರೆಸಿದರು. ಅದು ದೈವದಾಟವೆಂದು ಅವರು ಖಚಿತ ಮಾಡಿದರು. ನಿನ್ನ ತಂದೆಯನ್ನು ಅಂದಿನವರೆಗೆ ಲೋಕದ ಗಂಡು ಎಂದು ಕಾಣುತ್ತಿದ್ದ ನಾನು, ದೇವರೇ ಎಂದು ಭಾವಿಸಿದೆ-

''ದಿನಗಳು ಉರಳಿದವು-ನಾರದರೇ ನನಗೆ ಹೇಳಿದರು. ನೀನು ಮದುವೆಯಾಗುವ ಸಮಯ ಬಂದಾಗ ಯಾವ ಶಂಕೆಗೂ ಮನಸ್ಸನ್ನು ಈಡುಮಾಡದೆ - ಬಯಸಿ ಬಂದವನ ಕೈಹಿಡಿ......''

'ನನ್ನ ತಾಯಿಯ ಮದುವೆಯ ಹಿಂದೆ ನಾರದರ ಕೈಯಿರುವುದು ನನಗಿನ್ನೂ ಅದ್ಭುತವೆನ್ನಿಸಿತು. ಈ ಪ್ರಭಾವ ವಲಯದಲ್ಲಿ ನನ್ನ ತಾಯಿಯ ಜೀವನ ಗಂಗೆ ಸ್ವರ್ಗದಿಂದ ಇಳಿದು ಭೂಮಿಯ ರಾಜಕೀಯ ಸಮುದ್ರ ಸೇರಿದ ಅದ್ಭುತ ನನ್ನ ಚಿತ್ತದಲ್ಲಿ ಚಿತ್ರಿತವಾಯಿತು.

ಮನಸ್ಸನ್ನು ಕವಿದ ಜಾಡ್ಯದಿಂದ ನಾನು ಕೊಡವಿಕೊಂಡು ತಾಯಿಯನ್ನು ನೇರವಾಗಿ ಕೇಳಿದೆ

'ದಾಶನ ಗುಡಿಸಲಿನಿಂದ ಹಸ್ತಿನಾವತಿಯ ಸಿಂಹಾಸನಕ್ಕೆ ತಾಯಿ ಬಂದ ಹಾದಿಯನ್ನು ಕೇಳಿದರೆ ಚಾಪಲ್ಯವೆನ್ನಬಾರದು.........'

'ನೀನು ಯಾರು ಎಂಬುದು ನನಗೆ ಗೊತ್ತು. ನಿನ್ನ ಎದುರು ಜೀವನದ ಕತೆ ಹೇಳಲು ನನಗೆ ಏಕೆ ಸಂಕೋಚವಿರಬೇಕು? ಅಂದು ಆಚಾರ್ಯ ಬದರರ ಗುರುಕುಲದಿಂದ ಊರಿಗೆ ಬಂದು ಕೆಲದಿನ ಕಳೆಯುವುದರೊಳಗಾಗಿ ಒಂದು ದಿನ ಬಂತು-

'ಅದೂ ಒಂದು ಸುದಿನವೇ ಅನ್ನು.

'ಸಂಜೆಯ ನೇಸರು ದಣಿದು ತಾಯಿಯ ಹೊಟ್ಟೆ ಸೇರಬೇಕು ಎಂದು ತವಕಿಸುವಾಗ ನದಿಯ ಆಚೆಯ ದಂಡೆಯ ಮೇಲೆ ಹೆಗಲ ಮೇಲೆ ಬಿಲ್ಲು ಹೊತ್ತ ತೇಜಸ್ವಿಯಾದ ವ್ಯಕ್ತಿಯೊಂದು ನದಿಯ ದಂಡೆಗೆ ಬಂದು ಬೊಗಸೆಗೈಯಿಂದ ನೀರು ಕುಡಿಯುತ್ತಿತ್ತು. ನಾನು ದೋಣಿ ಬಿಡುವ ಅವಸರದಲ್ಲಿದ್ದವಳು, ಕೋಲನ್ನು ಊರಿ ನಿಂತು ಆ ವ್ಯಕ್ತಿಯನ್ನು ನೋಡಿಯೇ ನೋಡಿದೆ-

'ಬೊಗಸೆಯಿಂದ ನೀರು ಚೆಲ್ಲಿ ಮುಖವನ್ನು ಅವರು ಮೇಲೆತ್ತಿದರು. ನಾನು ಇದುವರೆಗೂ ಅಂತಹ ಗಂಭೀರ ವ್ಯಕ್ತಿಯನ್ನೆ ಕಂಡಿಲ್ಲ. ಮತ್ತೆ ನೋಡಬಾರದೆನ್ನಿಸಿದರೂ ಕಣ್ಣಿನ ಹಸಿವು ಕೇಳಲಿಲ್ಲ. ಅವರ ಕಡೆಗೆ ನೋಡುವ ಭರದಲ್ಲಿ ನಾನೂ ಅವರಿಗೆ ಕಂಡೆನೆಂದು ತಿಳಿಯಿತು. ನನಗೆ ನಾಚಿಕೆಯಾಯಿತು.

'ಅವರು ತುಂಬ ದಣಿದಿದ್ದರು. ಬೆನ್ನಿಗೆ ಇದ್ದ ಬತ್ತಳಿಕೆ, ಹೆಗಲಿನ ಬಿಲ್ಲು ತಲೆಯ ಮೇಲಿನ ಕಿರೀಟಗಳಿಂದ ನಾನು ಕತೆ ಕೇಳಿದ ರಾಜರ ಚಿತ್ರ ಕಣ್ಣೆದುರು ಬಂತು.

'ಇವರೂ ರಾಜರಿರಬಹುದು-ಎಂದುಕೊಂಡೆ-ಇನ್ನೊಂದು ಕ್ಷಣ ನಿಂತು ಅವರ ಕಡೆಗೆ ನೋಡಬೇಕೆಂದರೆ- ತಿರುಗಿ ಅವರು ನೋಡುವ ಭಯದಿಂದ ನಾನು ತಿರುಗಿ ನೋಡುವುದಾಗಲಿಲ್ಲ. ನನ್ನ ಕೈಯಲ್ಲಿರುವ ಕೋಲು ದೋಣಿಯನ್ನು ನೂಕದೆ ಸುಮ್ಮನೆ ನೀರ ಕೆಳಗಿನ ನೆಲಕ್ಕೆ ಆತು ನಿಂತುಕೊಂಡಿತ್ತು.

'ಸಂಜೆಯ ಹೊತ್ತು ಹಕ್ಕಿಗಳ ಚಿಲಿಪಿಲಿಯ ಹೊರತು ಬೇರೆ ಉಲಿವಿರಲಿಲ್ಲ. ಮಿನುಗಾರರೂ ಮನೆಗೆ ಹೋಗಿದ್ದರು. ನಾನು ಕೆಳಗೆ ಮುಖಮಾಡಿ ಎಷ್ಟುಹೊತ್ತು ನಿಂತೆನೋ ಯಾರಿಗೆಗೊತ್ತು? ನನ್ನ ದೋಣಿ ಒಮ್ಮೆಲೆ ತೂಗಾಡಿದ್ದರಿಂದ ನಾನು ಕಕ್ಕಾವಿಕ್ಕಿಯಾಗಿ ನೋಡುತ್ತೇನೆ, ಅವರು ದೋಣಿಯನ್ನೇ ಏರಿದ್ದರು-ನಾನು ತುಂಬ ಗಾಬರಿಗೊಂಡೆ.

'ಅತ್ತಿತ್ತ ನೋಡಿದೆ. ಆ ಗಾಬರಿಯ ಕ್ಷಣದಲ್ಲಿಯೆ ಮುಖವೂ ಕಂಡಿತು. ಮುಳುಗುವ ಸೂರ್ಯನ ಹಣ್ಣು ಬೆಳಕಿನಲ್ಲಿ ಅವರ ಮುಖದ ಮೇಲಿನ ಬೆವರಿನ ಹನಿಗಳು ಮಿಂಚುತ್ತಿದ್ದವು. ಅದರಲ್ಲಿ ನನಗೆ ಒಂದು ಬಗೆಯ ಆಶ್ವಾಸನವಿರುವಂತೆ ಕಂಡಿತು. ಆದರೆ ಈ ಆಶೆಗಿಂತಲೂ ಲಜ್ಜೆ ಪ್ರಬಲವಿತ್ತು. ಅದು ಪೀಡೆ ಕೊಟ್ಟು ಅವರ ಕಡೆಗೆ ನೋಡುತ್ತಿದ್ದ ನನ್ನ ಕಣ್ಣುಗಳನ್ನು ದೋಣಿಯ ಹಲಗೆಯತ್ತ ಹೊರಳಿಸಿತು.

'ನನಗೆ ದೋಣಿ ನೂಕದೆ ಗತ್ಯಂತರವಿರಲಿಲ್ಲ. ಈಗ ದೋಣಿ ನಡು ಹೊಳಗೆ ಬಂತು. ಗಾಳಿಯೂ ಇರಲಿಲ್ಲ. ಸೆಳವೂ ಇಲ್ಲ. ಅವರು ಒಮ್ಮೆಲೆ ಬಂದು ನನ್ನ ಸನಿಹಕ್ಕೆ ನಿಂತು-

'ದೋಣಿಯನ್ನು ನೂಕಿದರೆ ಬೇಗನೆ ದಡ ಬರುತ್ತದೆ-' ಆ ಮಾತು ಕೇಳಿ ನನ್ನ ಎದೆಯಲ್ಲಿ ಎಂದೋ ಮಲಗಿಕೊಂಡ ಆಶೆ ಎದ್ದು ಗರಿಗೆದರಿ ಕುಣಿಯಹತ್ತಿತ್ತು. ನಾನು ಹೆದರಿದೆ.

'ಹಿಂದೆ ನಾನೊಮ್ಮೆ ಹೀಗೆಯೆ.........

'ಅಲ್ಲ, ಹೀಗಲ್ಲ, ಅದು ನನ್ನ ಭಾಗ್ಯದ ಲಕ್ಷಣವಾಗಿತ್ತು. ಇಲ್ಲ. ಅದೆಲ್ಲ ಭಾಗ್ಯದ ಕ್ಷಣವೆಂದು ಹಿಂದಿನಿಂದ ನಿಶ್ಚಯವಾಯಿತು. ಆ ದಿನವೂ ನನ್ನ ಮೈ ಮನಸ್ಸು ಇಂತಹ ಪ್ರಾಯದ ಕುಚೋದ್ಯಕ್ಕೆ ಒಳಗಾಗಿದ್ದವು. ಕುಚೋದ್ಯವೇನು ಬಂತು? ಈಡೇರದ ಆಶೆಗಳನ್ನು ನಾನು ಒಳಗೆ ಅದುಮುತ್ತಲೆ ಹೋದೆ. ಸಮಯ ಬಂದಾಗ ಕಿತ್ತುಹೋದ ಕೋಡಿಯ ಕೆರೆಯಹಾಗೆ ಧುಮ್ಮಿಕ್ಕಿ ಬಂದವು ಈಗ

''ಬೇಗನೆ ದಡ ಬರುತ್ತದೆ......''

ಅವರು ಹಾಗೆಂದಾಗಲೇ ನನಗೆ ಎಚ್ಚರ,

27393

''ದಡ ತಲುಪಲೇಬೇಕು.''

'ಏಕೆ-ತಲುಪಬೇಕು? ದಡ ಮುಟ್ಟಿದರೆ-ಈ ಭಾಗ್ಯ ಕೈ ಸೇರದು. ಪ್ರಾಯ ನನ್ನ ಶರೀರದಿಂದ ಇನ್ನು ಬರದಂತೆ ಹೋಗುವ ಎಚ್ಚರವನ್ನು ನನಗೆ ಹಲವು ಸಲ ಕೊಡುತ್ತಲೇ ಇತ್ತು. ಆದರೆ ನನಗೆ ಸಾಕಷ್ಟು ಭಯ.

'ನಾನು ಒಮ್ಮೆ ಶಿಕ್ಷೆ ಹೊಂದಿ ಬಂದ ಹೆಣ್ಣು.

'ಒಮ್ಮೆ ಅಪರಾಧ ಮಾಡಿ ದಕ್ಕಿಸಿಕೊಂಡ ಕನ್ಯೆ.

ಈಗ ಮತ್ತೆ ಜಾರಿದರೆ ನನ್ನ ಜೀವಿತದ ಗತಿ? ನಾನು ತುಂಬ ಹೆದರಿದ್ದೆ. ಆದರೆ ಒಳಗಿನಿಂದ ನನ್ನ ಆಶೆಗಳೆಲ್ಲ ಹುರಿಗೊಂಡು ದೋಣಿ ಮುಂದೆ ನಡೆಸಿದರೆ ಎಚ್ಚರ ಎಂದು ನನ್ನ ಮುಂಗೈಯನ್ನು ಹಿಡಿದು ನಿಲ್ಲಿಸಿದ್ದವು. ದೋಣಿಯನ್ನು ನಾನು ನಿಲ್ಲಿಸಲಿಲ್ಲ. ಆದರೆ ದೋಣಿ ಒಂದಂಗುಲವೂ ಮುಂದೆ ಹೋಗಲಿಲ್ಲ.

'ದೋಣಿ ನಿಂತಿತ್ತು. ನನ್ನೊಳಗಿನ ಆಶೆಗಳೆಲ್ಲ ಮಾತನಾಡಿಕೊಂಡು ನನ್ನನ್ನು ಹಣ್ಣು ಮಾಡಿದ್ದವು. ದೋಣಿ ನಿಂತೊಡನೆಯೆ ಅವರು ಇನ್ನೂ ಹತ್ತಿರ ಬಂದು-

'ಚಲುವೆ ನೀನು ಯಾರು ?'

'ಅವರ ಪ್ರಶ್ನೆಯಲ್ಲಿ ಬಹಳ ಆತುರವಿತ್ತು. ನಾನು ಯಾರೆಂದು ಹೇಳುವುದಕ್ಕಿಂತ ನಾನು ಯಾರವಳೂ ಅಲ್ಲ ಎಂದು ಅವರಿಗೆ ನಾನು ಹೇಳಬೇಕಿತ್ತು ಎಂದು ಅವರು ಎಣಿಸಿದಂತೆ ಕಂಡಿತು. ಹಲವು ಪ್ರಶ್ನೆಗಳು ನಿಶ್ಚಿತ ಉತ್ತರವನ್ನೆ ಅಪೇಕ್ಷಿಸಿರುತ್ತವೆ. ಅವರ ಸಂಬೋಧನೆ ಪ್ರಿಯವೆನ್ನಿಸಿದರೂ ಸಂಕೋಚ ಅಡ್ಡ ಗಟ್ಟಿ ನನ್ನನ್ನು ದೂರ ಸೆಳೆದಿತ್ತು.

'ದೂರ ಹೋದ ನನ್ನ ಹತ್ತಿರವೆ ಮತ್ತೆ ಅವರು ಬಂದು,

'ಲಜ್ಜೆ ಅಲಂಕಾರವಾಗಬೇಕು, ಭಾರವಾಗಬಾರದು. ನಾನು ನಿನಗಾಗಿಯೆ ದೋಣಿ ಏರಿ ಬಂದಿದ್ದೇನೆ- ನೀನು ನನ್ನವಳಾಗಬೇಕು.........'

ನನ್ನ ಲಜ್ಜೆ ಸಂಕೋಚಗಳು ಮುಂದೆ ಕೆಲ ಹೊತ್ತಿನಲ್ಲಿಯೆ ಸೋತವು. ಅವರ ಪ್ರಭುಸಮ್ಮಿತಕ್ಕೆ ನಾನು ಶರಣಾದೆ. ನಾನು ಅವರವಳಾದೆ.

'ಗಳಿಗೆ ಗಳಿಗೆಗಳು ಒಂದಾದ ಮೇಲೊಂದು ಉರುಳಿದವು. ನೌಕೆ ಇನ್ನೂ ನಡು ಹೊಳೆಯಲ್ಲಿ ಆಡುತ್ತಿತ್ತು. ಮುಗಿಲಲ್ಲಿ ಚಂದ್ರನಿದ್ದಿಲ್ಲ, ಚಿಕ್ಕೆಗಳೆಲ್ಲ ಪಿಳಿಪಿಳನೆ ಎವೆಬಡಿದ ಕಣ್ಣಿನಿಂದ ನನ್ನನ್ನೇ ನೋಡುತ್ತಿದ್ದವು. ನಾನು ಸಾವರಿಸಿಕೊಂಡೆ

'ಈಗ ಸಮಯ ಎಷ್ಟಾಯಿತೋ ತುಂಬ ಕತ್ತಲಾಯಿತು.......

'ಆದರೇನಂತೆ--

'ನೀವು ಗಂಡಸರು -- ನಾನು ಬಾಗಿಲು ದಾಟಬಾರದ ಹೆಣ್ಣು. ಆಗಲೆ ದಂಡೆಗೆ ತಂದೆ ಬಂದರೂ ಬಂದಿರಬಹುದು.

'ಬರಲಿ ಬಿಡು --'

'ಎಂದು ಅವರು ಅಂದರೂ ಭಯ ನನ್ನನ್ನು ಆವರಿಸ ಹತ್ತಿತ್ತು. ಅಷ್ಟರಲ್ಲಿ ದಂಡೆಯ ಬದಿಯಿಂದ ನಮ್ಮ ಜನದ ಕೂಗು ---

'ಅದು ಅವರಿಗೂ ಕೇಳಿಸಿತು -- ನೋಡಿ ನಾನು ಹೇಳಲಿಲ್ಲವೆ?'

'ಅವರಿಗೆ ಅದೇನು ಮಹತ್ವದ್ದನ್ನಿಸಲಿಲ್ಲ. ಅವರು ನನ್ನ ವಿಷಯದಲ್ಲಿ ತುಂಬ ಮುಗ್ಧರಾಗಿದ್ದರು. -- ನಾನು ದೋಣಿಯನ್ನು ದಂಡೆಯ ಕಡೆಗೆ ನೂಕ ಹತ್ತಿದೆ. --

'ಅವರು ಏನೋ ಯೋಚನೆಯಲ್ಲಿದ್ದವರು ಮುಂದೆ ಬಂದು ನಾನು ನಿನ್ನನ್ನು ಬಿಟ್ಟುಕೊಡಲಾರೆ -- ಎಂದರು. ನಾನೇ ಆ ಮಾತು ಹೇಳಬೇಕೆಂದಿದ್ದೆ. ಅವರು ಅದನ್ನು ಅಂದಾಗ ನನ್ನ ವಿವೇಕ ಹೇಳಿತು, ಅದು ಹೇಗೆ ಸಾಧ್ಯ?

'ನಾನು ಅವರ ಮುಂದೆ ಎಲ್ಲವನ್ನೂ ವಿವರವಾಗಿ ಹೇಳಿದೆ -- ನನ್ನ ಮಾತನ್ನು ಸಾವಧಾನದಿಂದ ಕೇಳಿದರು. ಕೊನೆಗೆ ಅವರು -- ನಾನು ಯಾರು ಗೊತ್ತೇ --?

''ನನಗೆ ಹೇಗೆ ಗೊತ್ತಾಗಬೇಕು--?''

'ನಾನು ಹೇಳಿದ ಮಾತು ನನ್ನ ಮನಸ್ಸಿನದೂ ಆಗಿತ್ತು.

'ನಾನು ಈ ರಾಜ್ಯವನ್ನಾಳುವ ದೊರೆ--'

ನನಗೆ ಇನ್ನೂ ಭಯವಾಯಿತು. ಅಲ್ಲಿಯವರೆಗೆ ಅವರು ನಾನು ನಿನ್ನನ್ನು ಬಿಟ್ಟು ಹೋಗುವುದಿಲ್ಲ ಎಂದರೆ ನಂಬಿದ್ದೆ. ಆದರೆ ಈಗ ಅವರು ಸಾಮಾನ್ಯ ಮನುಷ್ಯರಾಗಿದ್ದಿಲ್ಲ. ರಾಜರು .... ನಾನು ನನ್ನ ಅವಸ್ಥೆಯನ್ನು, ಸ್ಥಿತಿಯನ್ನು ನೆನೆದುಕೊಂಡಾಗ ನನ್ನ ವ್ಯವಹಾರ

ಬಹಳ ಚಾಂಚಲ್ಯದ್ದು ಎನ್ನಿಸಿತು. ನಾನು ದುಡುಕಿದೆ ಎನ್ನಿಸಿತು. ಆದರೆ ನನಗೆ ಮತ್ತೇನು ಮಾಡಲಿಕ್ಕೆ ಸಾಧ್ಯವಿತ್ತು? ಇಷ್ಟು ದಿನ ಅದುಮಿದ ಹಾಗೆ -- ನನ್ನ ಆಸೆಗಳನ್ನು, ಉದ್ವೇಗಗಳನ್ನು ಇಂದೊಂದು ದಿನ ಹತ್ತಿಕ್ಕಿಕೊಂಡಿದ್ದರೆ..........

ಏನಾಗುತ್ತಿತ್ತು. ನಾನೋ ಸಾಮಾನ್ಯ ದೋಣಿ ಹಾಯಿಸುವ ಹೆಂಗಸು. ಅವರೋ ತಾವು ಹೇಳಿದಂತೆ ರಾಜ್ಯವನ್ನಾಳುವ ದೊರೆ -- ನನ್ನ ಆಶೆ ಆಕಾಂಕ್ಷೆಗಳು ಅವರ ವಿರೋಧಿಯಾಗಿ ನಿಲ್ಲಬಹುದಿತ್ತೇ? ಆ ಯೋಚನೆ ಏಕೆ ಎಂದು ಸುಮ್ಮನಿದ್ದೆ. ದಂಡೆ ಸಮೀಪ ಬಂತು. 'ನಾನು ನಿಮ್ಮ ಮನೆಗೆ ಬರುವೆ -- ಎಂದರು.

'ನನಗೆ ಭಯವಾಯಿತು. ನನ್ನ ತಂದೆ ತಾಯಿ ಎದುರಿನಲ್ಲಿ ನಾನಿದನ್ನೆಲ್ಲ ಹೇಳಲು ಧೈರ್ಯವಾಗಲಿಲ್ಲ. ಅವಾಂತರವಾಗುವುದೆಂದು ಸುಮ್ಮನಿದ್ದೆ. ನನ್ನ ಹೃದಯದಲ್ಲಿ ಬಹಳ ಆಸೆಯಾಗಿತ್ತು.

ನಿನ್ನನ್ನು ನಾನು ಬಿಡುವುದಿಲ್ಲ ಎನ್ನುವ ಅವರ ಮಾತು ನಡೆದರೆ ಎಷ್ಟು ಚೆನ್ನ? ಅವರು ನನ್ನ ಬಗ್ಗೆ ತುಂಬ ಕೇಳಿ ತಿಳಿದರು. ನಾನು ಒಂದು ಮಾತು ಮಾತ್ರ ಸ್ಪಷ್ಟ ಹೇಳುವೆ.

'ಮನೆಯಲ್ಲಿ ತಾಯಿ ತಂದೆ ಇದ್ದಾರೆ. ಅವರ ಒಪ್ಪಿಗೆ ದೊರೆತರೆ ನಾನು ನಿಮ್ಮವಳು....

'ನಾಳೆಯೆ ಅವನನ್ನು ರಾಜಭವನಕ್ಕೆ ಕರೆಸಿ ಹೇಳುವೆ-- 27393

ಆಗ ನನಗೆ ಆಸೆ ತುಟಿಯಹತ್ತಿರ ಬಂದ ಲಕ್ಷಣ ತೋರಿದವು. ನಾನು ಆತುರಪಟ್ಟು ಹೇಳಿದೆ--

'ನಿಜವಾಗಿಯೂ ನನ್ನನ್ನು ಅರಮನೆಗೆ ಕರೆದೊಯ್ಯುತ್ತೀರಾ ? ''

'ಖಂಡಿತವಾಗಿ --'

'ದಂಡೆ ಬಂತು -- ನೆರೆಮನೆಯ ಹುಡುಗರು ನದೀ ತೀರದಲ್ಲಿ ನನಗಾಗಿ ದಾರಿ ಕಾಯುತ್ತಿದ್ದರು. ಅವರು ನೌಕೆ ಇಳಿದು ಹೊರಟು ಹೋದರು. ಮುಂದೆ ವಾರ ಕಳೆಯಲಿಲ್ಲ. ನಾನು ಅವರಮನೆ ಸೇರಿದೆ. ಬರಿ ಹೆಂಗಸಾಗಿ ಅಲ್ಲ, ರಾಣಿಯಾಗಿ.

# ಮಾತೃ ಋಣ ಬಂಧ

ಮುಂದುವರಿದ ತಾಯಿಯ ಕಥೆ ಮುಕ್ತಾಯಗೊಂಡಿತು. ಅವಳನ್ನು ಕೈಹಿಡಿದು ತನ್ನ ಪಟ್ಟದರಸಿಯಾಗಿಸಿದವ ಹಸ್ತಿನಾವತಿಯ ದೊರೆ -- ಸಮ್ರಾಟ್ ಶಂತನು. ಶಂತನುವಿಗೆ ಈಗಾಗಲೆ - ಪ್ರಚಂಡನಾದ ರಾಜಕುಮಾರನಿದ್ದ.

ದಾಶನೆಂಬುವವನು ನನ್ನ ತಾಯಿಯ ತಂದೆ. ದಾಶನ ಹೆಂಡತಿ, ನನ್ನ ತಾಯಿಯ ತಾಯಿ. ಅವರು ಹಟ ಹಿಡಿದರು. '' ನನ್ನ ಮಗಳ ಸಂತಾನ ಹಸ್ತಿನಾವತಿಯನ್ನು ಆಳಬೇಕು.''

ಶಂತನುವಿಗೆ ಯೋಚನೆ ಬಿದ್ದಾಗ ಅವನ ಪ್ರಚಂಡ ಪುತ್ರ ದೇವವ್ರತ ತಂದೆಗಾಗಿ ಸಿಂಹಾಸನ ತ್ಯಾಗ ಮಾಡಿದ. ನನ್ನ ತಾಯಿ ದೇವವ್ರತನ ಸ್ವಭಾವವನ್ನು ತುಂಬ ಹೊಗಳಿದರು.

ನನ್ನ ತಾಯಿಗೆ ವಿವಾಹವೂ ಆಗಿತ್ತು, ವೈಧವ್ಯವೂ ಒದಗಿತ್ತು. ಹಸ್ತಿನಾವತಿಯ ದೊರೆ ಶಂತನು ಎರಡು ಮಕ್ಕಳ ತಂದೆಯಾಗಿ ನನ್ನ ತಾಯಿ ಹಾಗು ಅವಳ ಜತೆಗೆ ಇಬ್ಬರು ಮಕ್ಕಳನ್ನು ಬಿಟ್ಟು ನಿಧನ ಹೊಂದಿದ. ಈ ಸಮಾಚಾರ ಹೇಳುವಾಗ ತಾಯಿ ಪಟ್ಟ ದುಃಖವನ್ನು ನಾನು ನೋಡಿದೆ--

ತಂದೆ ಹಿಡಿದ ಹಾದಿಯನ್ನು ಒಂದೆರಡು ಮಾಸ ಕಳೆಯುವುದರೊಳಗಾಗಿ ಹಿರಿಯ ಮಗ ಹಿಡಿದ.

ತಾಯಿ ಮರಕ್ಕೆ ಸಿಡಿಲು ಬಡಿದ ಆಘಾತ. ಎಲ್ಲಿಯೋ ದೋಣಿಯ ಹೆಂಗಸಾಗಿ ಬದುಕಿದ್ದ ತನ್ನನ್ನು ತಂದು ಮಹಾರಾಣಿಯನ್ನು ಮಾಡಿದವರು, ಇಷ್ಟು ಬೇಗ ಕೈಬಿಡುವರೆಂದು ತಾಯಿ ಬಗೆದಿರಲಿಲ್ಲ. ಅಂತೂ ಮುಗಿಲು ಹರಿದು ಬಿದ್ದಿತ್ತು. ಹಿರಿಯ ಮಗ ಸತ್ತುಹೋದ.

ತಾಯಿ ಈ ಬೇಗೆಯಲ್ಲಿ ಬಸವಳಿದು ಹೋಗಿದ್ದಳು. ಸ್ವರ್ಗದಲ್ಲಿ ಅಚ್ಛೋದಾ! ನೆಲದ ಮೇಲೆ ಬಂದು ಬೆಸ್ತರ ಮಗಳು.

ಬಳಿಕ ಹಸ್ತಿನಾಪುರದ ರಾಣಿ!

ಸುಖದ ಸೋಪಾನವನ್ನೇರಿದ ಅವಳ ಬದುಕು ಕುಸಿದು ದುಃಖದ ಮಡಿಲಿನಲ್ಲಿ ಬಿತ್ತು.

ಕೈ ಹಿಡಿದ ಪತಿ ದೈವಾಧೀನನಾದ,

ಕೈಗೆ ಬಂದ ಮಗ ಕಾಲವಶನಾದ.

ಇಷ್ಟು ದುಃಖ ತಡೆದೂ ಹೆಣ್ಣು ಬದುಕಿರುವುದು ಆಶ್ಚರ್ಯ. ನನ್ನ ತಾಯಿಗೆ ಗಂಡಿನ ಎದೆ ಇತ್ತೆಂದೇ ಅವಳು ಈ ದುಃಖದ ಕಡಲು ಈಜುತ್ತಿದ್ದಳು. ಆ ದಿನ ಕತ್ತಲಾಗುತ್ತ ಬಂತು. ತಾಯಿ, ''ನಾಳೆ ಬೆಳಗಿನಲ್ಲಿ ಬರುವಿಯಷ್ಟೆ? ಇನ್ನೂ ತುಂಬ ಮಾತನಾಡಬೇಕು....'' ಎಂದಳು.

ನಾನು ಮರುದಿನ ಬೆಳಿಗ್ಗೆ ದೇವವ್ರತನನ್ನು ಕಂಡೆ. ಆತ ಒಳ್ಳೆ ಪ್ರಭಾವಶಾಲಿಯಾದ ತರುಣ! ನನ್ನ ಮೇಲೆ ತುಂಬ ಪ್ರಭಾವ ಬೀರಿದ್ದು ಅವನ ಸ್ಪಷ್ಟ ಮಾತುಗಾರಿಕೆ. ರಾಜಕೀಯಕ್ಕಿಂತ ಆತನಿಗೆ ಅರಣ್ಯದ ಕಡಗೇ ಹೆಚ್ಚು ಒಲವು. ಅರಣ್ಯದಲ್ಲಿದ್ದು ಶಕ್ತಿಗಳಿಸಿ, ಅದನ್ನು ರಾಜಕೀಯಕ್ಕೆ ಬಳಸಬಹುದು ಎಂದು ಅವನ ಅಭಿಲಾಷೆ.

ನನ್ನ ಬಿಡಾರದಿಂದ ದೇವವ್ರತ ಹೊರಟು ಹೋದ ಬಳಿಕ ವಿಚಿತ್ರವೀರ್ಯ ಬಂದು ಹೋದ. ಆ ನಂತರ ನನ್ನ ತಾಯಿ ಬಂದಳು. ವಿಚಿತ್ರವೀರ್ಯನ ಬಗ್ಗೆ ಅವಳು ಹಲವು ಸಂಗತಿ ಹೇಳಿದಳು. ಎಲ್ಲದರಲ್ಲಿಯೂ ನನಗೆ ದೇವವ್ರತನಾದ ಭೀಷ್ಮನ ಉದಾರ ನಿಲುವು ವ್ಯಕ್ತವಾಯಿತು,

''ವಿಚಿತ್ರವೀರ್ಯನು ಒಂದು ದೃಷ್ಟಿಯಿಂದ ನಿನ್ನ ಸಹೋದರನೇ ಅಲ್ಲವೆ?''

ತಾಯಿ ಈ ಸಂಬಂಧದ ಗಂಟಿಗೆ ನನ್ನನ್ನು ಏಕೆ ತೊಡಕಿಸಿದಳೋ ನನಗೆ ಅರಿವಾಗಲಿಲ್ಲ. ಅವಳ ದೈನ್ಯ-ಹಾಗು ದುಃಖ ಪರಂಪರೆಗಳನ್ನು ನೋಡಿ ನನಗೆ ಮರುಕು ಬಂದಿತ್ತು.

''ಸಹೋದರನು ನಿಜ, ಆದರೆ ದಾರಿ ಬದಲಾದ ಇಬ್ಬರು ಸಹೋದರರು ಎನ್ನು...''

''ವಿಚಿತ್ರವೀರ್ಯನ ಹೊಟ್ಟೆಯಿಂದ ಸಂತಾನವಿಲ್ಲ.''

ತಾಯಿ ಮಾತಿನ ದೋಣಿಯನ್ನು ಹೊಸ ದಡಕ್ಕೆ ತಿರುಗಿಸಿದಂತೆ ಭಾಸವಾಯಿತು!

''ಇನ್ನೂ ಆತ ಚಿಕ್ಕವ- ಆಗಬಹುದು.''

ತಾಯಿ ದೊಡ್ಡದೊಂದು ನಿಟ್ಟುಸಿರೆಳೆದಳು. '' ಅದು ಅಷ್ಟು ಸುಲಭವಿಲ್ಲ.... ಆಗುವುದಿಲ್ಲ'' ಮತ್ತೆ ತಾಯಿಯ ಉಸಿರು.

ನಾನು ಆತುರಗೊಂಡು ಕೇಳಿದೆ- ''ಅದು ಹೇಗೆ- ಆಗುವದಿಲ್ಲ..........?''

''ಈ ರಾಜರಿಗೆಲ್ಲ ತಾವು ಬಲವಂತರೆಂಬ ಗರ್ವ ಬೇರೆ ಇರುತ್ತದೆ . ಯಕ್ಷಕನ್ಯೆಯರ ಮೇಲೆ ಈ ಪ್ರಚಂಡ ವಿಚಿತ್ರವೀರ್ಯ ಒಮ್ಮೆ ಕೈ ಮಾಡಿದ. ಅದರ ಸೇಡಿಗೆಂದು ಯಕ್ಷರೆಲ್ಲ ಕೂಡಿ ಇವನನ್ನು ಬಂಧಿಸಿ ಸೆರೆ ಇಟ್ಟು, ಇವನ ಪೌರುಷವನ್ನೇ ವಿಫಲಗೊಳಿಸಿದರು......''

''ರಾಜಕೀಯದ ಅವಾಂತರಗಳಲ್ಲಿ ಇವೂ ನಡೆಯಬೇಕು .....'' ಎಂದು ಮನದಲ್ಲಿಯೇ ನುಡಿದೆ.

'' ಹಸ್ತಿನಾವತಿಯ ರಾಜ್ಯ ಮುಂದುವರಿಯಬೇಕು. ವಂಶದೀಪ ಎಂದೂ ಬೆಳಗಬೇಕು.''

''ನಿಜವಾಗಿಯೂ ಬೆಳಗಬೇಕು.''

''ಹಾಗಾಗಬೇಕಾದರೆ ವಿಚಿತ್ರವೀರ್ಯನಿಗೆ ಮಕ್ಕಳಾಗಬೇಕು.''

ನಾನು ಒಂದು ಕ್ಷಣ ಯೋಚನೆಗೆ ಒಳಗಾದೆ. ಧರ್ಮ ಸಂಕಟ, ವಿಚಿತ್ರವೀರ್ಯನಿಗೆ ಮಕ್ಕಳಾಗದೆ, ವಂಶ ಮುನ್ನಡೆ ಯುವ ಮಾರ್ಗವೇನು......? ನಾನೂ ಮೌನದಿಂದಿದ್ದೆ. ತಾಯಿ ಮುಂದುವರಿದು ಹೇಳಿದಳು.

''ನೀನೋ ತಪಸ್ವಿ, ಅಲ್ಲದೆ ಮಹಾನುಭಾವ. ನಿನ್ನನ್ನು ಹುಡುಕಿ ಬರುವವರು ಸಾವಿರ ಜನ. ಇಂದು ಇಲ್ಲಿ; ನಾಳೆ ಇಲ್ಲಿಂದ ಹಲವು ಯೋಜನ ದೂರ! ಇಷ್ಟಾದರೂ ನಾನು ಕಷ್ಟಪಟ್ಟು ನಿನ್ನ ಆಶ್ರಮ ಶೋಧಿಸಿ ಹುಡುಕಿಸಿ ಕರೆತಂದೆ. ಯಾಕೆ ಗೊತ್ತೇ? ವಿಚಿತ್ರವೀರ್ಯನಿಗೆ ಇಬ್ಬರು ಹೆಂಡಂದಿರು. ಇವನ ಪಾಡು ಹೀಗಾಯಿತು, ಮುಂದೆ ರಾಜ್ಯದ ಗತಿ ಏನು......?''

ತಾಯಿ ಅದರ ಪರಿಹಾರವನ್ನು ನಾನು ಹೇಳಲಿ ಎಂದು ಬಯಸಿದ್ದಳು. ಆದರೆ ಪರಿಹಾರದ ಉಪಾಯ ನನಗೆ ಹೊಳೆಯಲಿಲ್ಲ. ನಾನು ಪರಿಹಾರ ಸಿಕ್ಕದೆ ಪೇಚಾಡುತ್ತಿರುವುದನ್ನು ಕಂಡು ನೇರವಾಗಿಯೇ ಹೇಳಿದಳು.

''ಈಗ ವಿಚಿತ್ರವೀರ್ಯನ ಹೆಂಡತಿಯಲ್ಲಿ ನಿಯೋಗ ವಿಧಿಯಿಂದ ಮಕ್ಕಳಾಗಬೇಕು.''

ತಾಯಿಯ ನಿಶ್ಚಯ ನನ್ನ ಮನದ ಕತ್ತಲಲ್ಲಿ ಮಿಂಚು ಚಿಮ್ಮಿಸಿತು. ಆದರೆ ಅದು ಬೆಳಕು ನೀಡಲಿಲ್ಲ; ಕಂಗೆಡಿಸಿತು. ಮತ್ತೆ ನನಗೆ ತಿಳಿಯದೆ ಬಹಳವಾಯಿತು. ತಾಯಿ ಇಷ್ಟು ನೇರ ಮಾತನಾಡಿದರೂ ನಾನು ಉತ್ತರಿಸದಿದ್ದರೆ ಅವಳ ಶಂಕೆಯ ಕಡ್ಡಿ, ಗುಡ್ಡದಷ್ಟಾದೀತೆಂದು ಹೇಳಿದೆ.

''ರಾಜಗುರುಗಳು ಅನುಮತಿಸಿದರೆ ವಿಚಿತ್ರವೀರ್ಯನ ಬಂಧು ದೇವವ್ರತನೇ ಇರುವನಲ್ಲ, ಬಹು ಧೀರನಾದ ವ್ಯಕ್ತಿ. ಯೋಗ್ಯನಿದ್ದಾನೆ.''

ನನ್ನ ಮಾತು ಇನ್ನೂ ಮುಂದುವರಿಯುವುದರೊಳಗಾಗಿ ತಾಯಿ ಅವಸರದಿಂದ ಉದ್ವೇಗಗೊಂಡು ಹೇಳಿದರು.

''ಆ ಬಾಗಿಲನ್ನು ನಾನು ಈ ಕೈಗಳಿಂದಲೇ ಮುಚ್ಚಿದ್ದೇನೆ. ನಾನು ಹಸ್ತಿನಾವತಿಯ ರಾಣಿಯಾಗುವ ಮುನ್ನವೇ ನನ್ನ ತಂದೆ ನನ್ನ ಮಕ್ಕಳಿಗೆ ರಾಜ್ಯವಾಗಬೇಕು ಎಂದು ಹಟ ಹಿಡಿದ. ಗತಿಸಿದ ಮಹಾರಾಜರು ಬಹು ಉದಾರರು. ನನ್ನ ವಿಷಯದಲ್ಲಿ ಅವರಿಗೆ ಬಹಳ ಆಕರ್ಷಣೆ

ಇದ್ದರೂ ಧರ್ಮಭೀರುಗಳಾದ ಅವರು ದೇವವ್ರತನ ನೆನಪಾಗಿ ತಬ್ಬಿಬ್ಬಾದರು-ತಂದೆಗೆ ಏನೂ ಹೇಳದೆ ಹೋಗಿ ನನ್ನ ಹಾದಿ ಬಿಟ್ಟು ಮನೆಯಲ್ಲಿ ಅನ್ನ ನೀರಿಲ್ಲದೆ ಬಿದ್ದುಕೊಂಡರು. ಮಂತ್ರಿಗಳಿಗೆ ಈ ಸಮಾಚಾರ ತಿಳಿಯಿತು. ಅವರು ದೇವವ್ರತನನ್ನು ಕಂಡು ಹೇಳಿದರು. ದೇವವ್ರತ ನೇರವಾಗಿ ನಮ್ಮ ತಂದೆ ಇದಿರು ಬಂದು 'ನಾನು ಆಜೀವ ಬ್ರಹ್ಮಚಾರಿಯಾಗುವೆ- ಪಟ್ಟವನ್ನು ಏರಲಾರೆ'ನೆಂದು ಆಣೆ ಮಾಡಿದ.''

''ಆದರೆ ನಿಯೋಗವು ಧರ್ಮಶಾಸ್ತ್ರ ಸಿದ್ಧವೇ ಆಗಿದೆ. ನೀನು ಆ ದೇವವ್ರತನನ್ನು ಕೇಳಿದಿಯಾ?''

''ದೇವವ್ರತ ಏಕವಾಕ್ಯದ ಮನುಷ್ಯ. ಆತ ಒಮ್ಮೆ ಮಾತನಾಡಿದ ಮೇಲೆ ಒಡಂಬಡಿಕೆ ಎಂಬುದೇ ಇಲ್ಲ. ತಾನು ಬ್ರಹ್ಮಚಾರಿ, ಈ ಕಾರ್ಯ ತನ್ನಿಂದ ಸ್ಪಷ್ಟವಾಗಿ ಆಗುವುದಿಲ್ಲ ಎಂದು ಹೇಳಿದ್ದಾನೆ......''

''ಹಾಗಾದರೆ ಈಗ ಏನು ವಿಧಿ?''



''ನೀನು ವಿಚಿತ್ರವೀರ್ಯನ ಅಗ್ರ ಬಂಧುವೇ ಆಗಿದ್ದೀ.

ಇದು ನಿನಗೆ ಅನಿವಾರ್ಯ . ಆದ್ದರಿಂದ ನೀನು ನಿನ್ನ ತಾಯಿಯ ಋಣವನ್ನು ಈ ವಿಧದಿಂದ ತೀರಿಸಬೇಕು.....''

ನನ್ನ ತಾಯಿ ಕರುಣೆ, ಗಾಂಭೀರ್ಯಗಳೊಡನೆ ಈ ಮಾತು ಹೇಳಿದ್ದಳು. ಆಗ ನನ್ನನ್ನು ಹಸ್ತಿನಾವತಿಗೆ ಕರೆಸಿದ್ದರ ರಹಸ್ಯ ತಿಳಿಯಿತು. ನಾನು ವಿಚಾರದ ಸುಳಿಯೊಳಗೆ ಸಿಕ್ಕು ಮುಂದುಗಾಣದವನಾಗಿ ಚಿಂತಿಸಹತ್ತಿದೆ. ನನಗೆ ವಿಚಾರಕ್ಕೆ ಅವಕಾಶ ನೀಡಬೇಕೆಂದು ತಾಯಿ ಸಂಜೆಗೆ ಬರುವುದಾಗಿ ಹೇಳಿ ಹೋದರು.

ತಲೆ ಗಿರ್ರೆಂದಿತ್ತು!

ಬ್ರಹ್ಮಸೂತ್ರವನ್ನು ಲೀಲಾಜಾಲವಾಗಿ ರಚಿಸುವ ನನ್ನ ಪ್ರಜ್ಞಾಶಕ್ತಿ! ದೇವತೆಗಳನ್ನೂ ಆಶ್ರಮದ ಅಂಗಳಕ್ಕೆ ತರುವ ಭಾವನಾದಾರ್ಢ್ಯ! ಹಸ್ತಿನಾವತಿಗೆ ಬಂದಾಗಿನಿಂದ ಶತದ್ರು ತೀರದಲ್ಲಿ ಆಶ್ರಮ ಕಟ್ಟಿದ ಬಾದರಾಯಣ, ಶಮ್ಯಾಶ್ರಮದಲ್ಲಿ ನಿಂತ ವ್ಯಾಸ ನಾನೆಯೆ? ಎಂದು ನನ್ನನ್ನು ನಾನೇ ಪ್ರಶ್ನಿಸಿಕೊಂಡೆ. ಜನವನ್ನು ಹೆದರಿಸಿಕೊಂಡು ಬಾಳಿದರೂ ರಾಜಕಾರಣದಲ್ಲಿ ಮನುಷ್ಯ ತನ್ನೊಳಗೆ ತಾನು ಪುಕ್ಕನೇ ಇರುವನೆಂಬ ಸಂಗತಿ ನನಗೆ ಹಸ್ತಿನಾವತಿಯಲ್ಲಿ ಒಂದು ದಿನದಲ್ಲಿ ಹೊಳೆಯಿತು. ನನ್ನ ಮನಸ್ಸಿನ ಮೇಲಿನ ಹಿಡಿತ ನನಗೆ ಪೂರ್ತಿ ತಪ್ಪಿತ್ತು. ಆದರೆ ಸ್ಮೃತಿ ಕೇಳುವುದೇ? ಹಳೆಯದೆಲ್ಲವನ್ನೂ ಕೆದಕಿ ಚಿಮ್ಮುತ್ತಲೇ ಇತ್ತು. ಹಲವು ವರುಷಗಳ ಹಿಂದೆ ನನ್ನ ಉಪನಯನದ ದಿನ ತಂದೆ ಹೇಳಿದರು-

''ನಿನ್ನ ತಾಯಿ ಬರುವಳು; ಆದರೆ ನೀನು ಹೋಗದಿರು................''

ನನಗೆ ಆ ಮಾತೇಕೆ ಈಗ ನೆನಪಾಯಿತು?

ಆಗದೇನು? ಮನಸ್ಸಿಗೆ ಕಾಲು ಒಂದೆ, ಎರಡೆ ? ಕಾಲವೂ ಅಷ್ಟೆ! ತಾಯಿ ನನ್ನ ಮೇಲೆ ಹೊರೆಸಿದ ಹೊರೆಯಿಂದ ತತ್ತರಿಸುತ್ತಿದ್ದೆ. ತಾಯಿಯ ಕರುಣೆ, ವಾತ್ಸಲ್ಯಗಳನ್ನೂ ಒಂದು ಕ್ಷಣ ನನ್ನ ಮನ ಶಂಕಿಸಿತು. ಆಗ ತನ್ನ ಪುರಸ್ಕಾರಕ್ಕಾಗಿ ಮನ ಹಾತೊರೆಯಿತು. ಓಡಿತು. ಅದಕ್ಕೆ ಬೆಂಬಲ ದೊರಕಲು ಅದೆಷ್ಟೋ ವರುಷಗಳ ಘಟನೆಗಳನ್ನು ಒಂದೊಂದಾಗಿ ಅದು ಕೆದಕಿತು.

ಅಂದಿನ ಆ ಘಟನೆ- ಉಪನಯನದ ದಿನದಂದು ತಂದೆ ಹೇಳಿದರು. ''ನಿನ್ನ ತಾಯಿ ಬರುವಳು... ಆದರೆ ನೀನು ಹೋಗಬೇಡ.....''

ನಾನು ಹಟತೊಟ್ಟಿದ್ದೆ. ''ನಾನು ಹೋಗುವವನು....'' ತಂದೆ ನಿಷ್ಠುರವಾಗಿ ಹೇಳಿದರು. ''ಆಗಲಿ ನಿನ್ನ ಪ್ರಾರಬ್ಧ....''

ನನ್ನ ತಂದೆ ಹೀಗೇಕೆ ಹೇಳಿರಬೇಕು?

ತಾಯಿಯ ಬಗ್ಗೆ ಅವರಿಗೆ ಅಷ್ಟು ಅಸಡ್ಡೆಯೆ?

ಏಕಿರಬೇಕು?

ನನ್ನ ತಾಯಿ ಅವರಿಗಾಗಿ ತನ್ನ ಕೌಮಾರ್ಯವನ್ನು ಈಡಾಡಿದಳು. ಕಾಡಿನಲ್ಲಿ ಅವರ ಮಿಲನದ ಭಾರ ಹೊತ್ತು ವನವಾಸ ಮಾಡಿದಳು. ನವಮಾಸ ಕಳೆದಳು. ಇದೆಲ್ಲ ತಮಗಾಗಿಯೆ ಅವಳು ಮಾಡಿದ್ದಲ್ಲವೆ? ಹೀಗಿದ್ದರೂ ತಂದೆ ನನಗೆ ಹೇಳಿದರು: ''ನಿನ್ನ ತಾಯಿ ಬರುವಳು. ಆದರೆ ನೀನು ಹೋಗಬೇಡ.''

ತಂದೆ ನಿಷ್ಠುರರೇ? ಕ್ರೂರರೆ ? ತನಗಾಗಿ ಜೀವ ತೇದವಳನ್ನು ಈ ರೀತಿ ಉಪಕರಿಸುವುದೆ?

ಮತ್ತೆ ಮನಸ್ಸು ತಂದೆಯವರ ಪರಿಸರದಲ್ಲಾಡಿತು.

ತಂದೆ ಮಹಾನುಭಾವರು. ಅವರು ಕ್ರೂರರಲ್ಲ. ಕ್ರೌರ್ಯ-ಕಾರುಣ್ಯಗಳೆಲ್ಲ ಊರು, ಮನೆ, ಜನ ಕಟ್ಟಿಕೊಂಡು ಬಾಳುವ ಜನಕ್ಕೆ. ಅವರು ಇದೆಲ್ಲವನ್ನು ಮೀರಿದವರು. ಈ ನೀತಿಯನ್ನೇ ಅವರು ಕಾಲಿಗೆ ತೊಡಕಿಸಿಕೊಂಡಿದ್ದರೆ-ಅವರು ಮಹರ್ಷಿಗಳಾಗುತ್ತಿದ್ದಿಲ್ಲ. ಗೃಹಸ್ಥರಾಗಿ ಬದುಕುವ ಒಬ್ಬ ಸಾಂಸಾರಿಕರಾಗಿ ಬಾಳುತ್ತಿದ್ದರು. ತಂದೆ ನನಗೆ ಮಾತೃ ಸೇವೆಯನ್ನು ಉಪದೇಶಿಸಬಹುದಿತ್ತು. ಆದರೆ ಅವರು ನನ್ನನ್ನು ಎಚ್ಚರಿಸಿದರು. ತಾಯಿಯ ವ್ಯಾಮೋಹದಲ್ಲಿ ಬೀಳಬೇಡ ಎಂದು.

ನಾನು ಗರಗರನೆ ಸುತ್ತಿ ಕಣ್ಣು ತೆರೆದ ಮಕ್ಕಳಂತೆ ಆಗುತ್ತಿದ್ದೆ. ಒಂದು ಕ್ಷಣ ಎಲ್ಲವೂ ತಿರುಗುತ್ತಿರುವಂತೆ ಭಾಸವಾಗುತ್ತಿತ್ತು. ಬ್ರಹ್ಮ ಚಿಂತನೆಯಲ್ಲಿ ತೊಡಗಿದ ನಾನು ನಿರ್ಭೀತನೂ, ಪ್ರಚಂಡನೂ, ವಿಶಾಲನೂ ಆಗಿರುತ್ತಿದ್ದೆ.

ಆದರೆ.....ತಾಯಿ, ಅವಳ ಮಕ್ಕಳು...ರಾಜ್ಯವನ್ನು ವಿಚಾರಿಸಿದಾಗ ನಾನು ವಿಹ್ವಲನಾಗುತ್ತಿದ್ದೆ. ಭೀತನೂ ಆಗುತ್ತಿದ್ದೆ. ಅಂತೆಯೆ ನನ್ನ ತಂದೆ ನನ್ನ ತಾಯಿಯ ಸೆರಗಿನಿಂದ ದೂರವಿರಲು ಹೇಳಿರಬಹುದು.



ಈಗ ತಾಯಿ ತನ್ನನ್ನು ಕರೆದಿದ್ದಾಳೆ. ಮಾಡುವುದೇನು? ಅವಳ ಮಾತು ನಡೆಸಬೇಕೆ....? ಬೇಡವೆ?

ಪ್ರಾಜ್ಞರಾದ ತಂದೆಯೂ ನನ್ನ ಹಿತವನ್ನೇ ಹೇಳಲಿಲ್ಲವೆ?

ಹಾಗಾದರೆ ತಾಯಿ ತನ್ನ ಅಹಿತ ಬಯಸುವ ವಸ್ತುವೆ?

ಅಲ್ಲ, ಏಕಾಗಬೇಕು? ತಾಯಿಗೆ ನನ್ನ ಮೇಲೆಯೂ ಮಮತೆ ಇದೆ. ಅಲ್ಲದೆ ಈಗ ನನಗಾದರೂ ಅಂತಹ ವಿರೋಧವಾದದ್ದನ್ನು ಏನು ಹೇಳಿದ್ದಾಳೆ? ದೂರ, ಬಹುದೂರ ನಾನಿರುವಾಗ, ತನಗೇನೂ ತೋಚದಿರುವಾಗ ನಾನು ದಾರಿ ತೋರಬಹುದೆಂದು ಯಾಚಿಸಿದ್ದಾಳೆ.

ಏನು ತಪ್ಪು? ತಾಯಿಯಲ್ಲದವಳು ಯಾಚಿಸಿದ್ದರೂ ಅಂತಹ ಸಹಾಯ ಮಾಡುವುದು ಮನುಷ್ಯ ಧರ್ಮ ಅಲ್ಲವೆ?

ಕರುಣೆ ಸಹಾನುಭೂತಿ ಇಲ್ಲದ ಬದುಕು ಕ್ರೂರ, ಅತಿ ಕ್ರೂರ!

ನಿಜಕ್ಕೂ ಮನುಷ್ಯನ ಬದುಕು ಕರುಣೆಯ ನಿಧಿಯಾಗಿರಬೇಕು-ದೇವರೂ ಕರುಣಾನಿಧಿಯೇ ಅಲ್ಲವೆ?

ಹಾಗಿದ್ದರೆ- ತಂದೆಯವರು ನನ್ನನ್ನು ತಾಯಿಯ ಹತ್ತಿರ ಹೋಗಲು ನಿಷೇಧಿಸಿದ್ದೇಕೆ?

ತಂದೆಗೆ-ಮಾನವ ಧರ್ಮದ ಪರಿಚಯವಿಲ್ಲವೆ?

ಅವರು ಮಾನವ ಧರ್ಮ ವಿರೋಧಿಯಾಗಿದ್ದರೆ?

ಎರಡು ಪ್ರಬಲ ವಿರೋಧಿ ಸತ್ವಗಳು ಸಮಾನ ಬಲದಿಂದ ನನ್ನನ್ನು ತಿವಿಯುತ್ತಿದ್ದವು.

ನನ್ನ ತಂದೆ ನನ್ನಲ್ಲಿ ಕಂಡದ್ದೇನು?

ನಾನು ನನ್ನ ಬಗೆಗೆ ಹೇಳಿದ್ದೇನು?

ನಾನು ಮಾನವತೆಯ ಎಲ್ಲೆ ಮೀರುತ್ತೇನೆಂಬ ವಿಶ್ವಾಸ ತಾಳಿದ್ದರು. ಅಷ್ಟು ದೂರ ಹೋಗುವ ಹಂಬಲ ಇದ್ದವನಿಗೆ

ಕರುಣೆ ಕಾಲ್ತೊಡಕೇ.....?

ಖಂಡಿತ ತೊಡಕು. ಬಿಡಲಾರದ ಬಂಧನ.

ಜೀವನದ ಊರ್ಧ್ವಗಮನದಲ್ಲಿ ಕ್ರೌರ್ಯದಷ್ಟೇ ಕರುಣೆಯೂ ನಿಷಿದ್ಧ. ಕರುಣೆಯನ್ನು ನಿಷೇಧಿಸುವ ಜೀವ, ಕ್ರೌರ್ಯವನ್ನು ಗೆದ್ದು, ಕರುಣೆಯ ಪ್ರಾಂತ ದಾಟಲು ಸಿದ್ಧವಿರಬೇಕು. ಈಗ ನಾನು ಅಷ್ಟು ಪ್ರಬುದ್ಧನೆ?

ಆಗಿದಿದ್ದರೆ-ನನ್ನ ಜೀವನ ಕ್ರಮ, ನಾನು ತುಳಿಯ ಬೇಕೆನ್ನುವ ಹಾದಿ ಜಲಮಯವಾದೀತು? ಈ ದ್ವಂದ್ವದಲ್ಲಿ ನಾನು ತುಂಬ ಗಾಸಿಗೊಂಡೆ.

ಬಾಗಿಲ ಮರೆಯಿಂದ ತಾಯಿ ಒಳಗೆ ಬಂದಳು. ಗಟ್ಟಿ ಗೊಳ್ಳುತ್ತಿದ್ದ ಮನಸ್ಸು ಮತ್ತೆ ನೀರಾಯಿತು. ಅವಳ ಮುಖ ನೋಡುತ್ತಲೇ ಅಧೀರನಾದೆ. ಅವಳ ಕಣ್ಣಂಚಿನಲ್ಲಿ ನಿಂತ ನೀರು ನನ್ನ ಮನದ ವಜ್ರಲೇಪವನ್ನು ತೊಳೆಯಲು ಸಮರ್ಥವಾಗಿತ್ತು. ನಾನು ಎದ್ದು ಬಾಗಿಲಿನ ವರೆಗೆ ಬಂದು ತಾಯಿಯನ್ನು ಕರೆದು ತಂದು ಆಸನದಲ್ಲಿ ಕುಳ್ಳಿರಿಸಿದೆ.

''ನಿಯೋಗದ ವಿಚಾರ ಎಲ್ಲಿಗೆ ಬಂತು?''

ತಾಯಿ ನನ್ನನ್ನೇ ಕೇಳಿದಳು. ಈಗ ಅದರ ಬಗ್ಗೆ ನಿರ್ಣಯ ಹೇಳುವವನು ನಾನು! ನನ್ನ ತಾಯಿಯ ಆನಂದ-ದುಃಖ ನನ್ನ ನಿರ್ಣಯವನ್ನು ಅವಲಂಬಿಸಿದ್ದವು.

ಮನಸ್ಸಿಗೆ ದುರ್ಬಲತೆ ಬಹುಬೇಗ ಪ್ರಿಯವಾಗಿರುತ್ತದೆ. ಏಕೆಂದರೆ ಧೈರ್ಯಕ್ಕಾಗಿ ಅದು ಬಹು ದೂರ ಹೋಗಬೇಕು. ದುರ್ಬಲತೆ ಬಹು ಬೇಗ ಅದಕ್ಕೆ ದೊರೆಯುತ್ತದೆ.

''ನಿಯೋಗಕ್ಕೆ ಪಾತ್ರಾಪೇಕ್ಷೆಯೂ ಅಗತ್ಯವೇ ಅಲ್ಲವೆ?''

''ನನ್ನ ಪುತ್ರವಧುಗಳು ಏನೂ ಅರಿಯದ ಹಸುಳೆಗಳು. ನಾನು ಅವರಿಗೆ ಈ ವಿಚಾರವೆನ್ನೆಲ್ಲ ವಿಶದವಾಗಿ ತಿಳಿಸಿದ್ದೇನೆ. ಹೆಣ್ಣಿನ ಬದುಕಿನಲ್ಲಿ ಸಂತಾನವಿಲ್ಲ ಎನ್ನುವುದಕ್ಕಿಂತ ದೊಡ್ಡ ನಿರಾಶೆ ಯಾವುದು? ವಂಶ ವಿಸ್ತಾರದ ಆಕಾಂಕ್ಷೆ ಅವರದ್ದು. ಹೊಣೆಯೂ ಅವರದು. ಆದರೆ ಇಂತಹ ಧರ್ಮ ಸೂಕ್ಷ್ಮ ಪ್ರಸಂಗದಲ್ಲಿ ಅವರಿಗೆ ಹಿರಿಯರೆನ್ನಿಸಿದವರು ದಾರಿ ತೋರಬೇಕು. ಅಷ್ಟೆ''

ತಾಯಿಯ ಮಾತಿನಲ್ಲಿ ನಾನು ನಿಯೋಗಕ್ಕೆ ಒಪ್ಪದಿರುವ ಪ್ರಶ್ನೆಯೇ ಇರಲಿಲ್ಲ. ನಿನ್ನೆ ನನ್ನ ತಲೆಯನ್ನು ರಥದ ಚಕ್ರವಾಗಿ ತಿರುಗಿಸಿದ್ದರೂ ಒಂದು ಕ್ಷಣದಲ್ಲಿ ಆಗುವ ಸ್ಥಿತ್ಯಂತರ ಅದ್ಭುತ! ನಾನು ತಾಯಿಯ ಮಾತಿಗೆ ಇಲ್ಲವೆನ್ನುವ ಧೈರ್ಯ ತೋರಲಾರದವನಾಗಿದ್ದೆ. ನನಗೆ ತಿಳಿಯದಂತೆಯೆ ತಂದೆಯ ಬಲ ಒಂದೊಂದೇ ಹೆಜ್ಜೆ ಹಿಂದೆಸರಿಯುತ್ತಿತ್ತು. ಅದು ಎವೆ ತೆರೆದು ಮುಚ್ಚುವ ಹೊತ್ತಿನಲ್ಲಿ ಬಹು ದೂರ ಸರಿದಿತ್ತು. ಆದರೂ ತನ್ನ ವಿರೋಧಿಯಾಗಿ ಬರುತ್ತಿರುವ ತಾಯಿಯ ಅಭಿಪ್ರಾಯವನ್ನು ಎದುರಿಸುವ ಸಾಹಸ ಬಿಟ್ಟುಕೊಟ್ಟಿರಲಿಲ್ಲ.

ತಾಯಿ ತನ್ನ ಪುತ್ರ ವಧುಗಳನ್ನು ಕರೆತಂದಳು. ಪಾಪ ಏನೂ ಅರಿಯದ ಮುಗ್ಧಜೀವಿಗಳವರು. ನಾನೊಮ್ಮೆ ಅವರನ್ನು ನೋಡಿದೆ. ಮುಖ ಕಾಣಲಿಲ್ಲ. ಆದರೂ ಬಹು ಭಾರವಾದ ಲಜ್ಜೆ ದೈನ್ಯಗಳಿಂದ ಅವರು ಆವೃತರಾಗಿದ್ದರು. ನನ್ನ ದ್ವಂದ್ವ ಮುಗಿದಿರಲಿಲ್ಲ. ಆದರೆ ನಿರ್ಣಯ ಹೇಳದೆ ಅನ್ಯ ವಿಧಿಯಿರಲಿಲ್ಲ.

''ಈ ಕ್ಷೇತ್ರದಲ್ಲಿಯ ಸಂತಾನ ರಾಜ್ಯ ರಕ್ಷಣೆಗೆ ಕ್ಷಮವಾಗಿರಬೇಕು. ಧರ್ಮ ರಕ್ಷಣೆಯಲ್ಲಿ ದಕ್ಷವಾಗಿರಬೇಕು.''

ತಾಯಿ ಹಿಗ್ಗುಗೊಂಡು ಹೇಳಿದಳು.

''ನೀನು ಅಂತಹ ಪ್ರಶಸ್ತನೇ ಇದ್ದೀ. ಪರಮಾತ್ಮನು ನಿನ್ನ .ಸಂಕಲ್ಪವನ್ನು ಎಂದಿಗೂ ವಿರೋಧಿಸಲಾರ!''

''ನನ್ನ ಮಾತು ಇರಲಿ, ನಿನ್ನ ಪುತ್ರವಧುಗಳ ಮನಸ್ಸೂ ಪ್ರಸನ್ನವಿರಬೇಕು, ಪ್ರಶಸ್ತವಿರಬೇಕು. ಸತ್ವಗ್ರಹಣಕ್ಕೆ ಅವರ ಸಿದ್ಧತೆಯೂ ಅವಶ್ಯವಲ್ಲವೆ?''

''ಅವಶ್ಯವೇ ಆಗಿದೆ.''

ತಾಯಿಯ ಮಾತಿನಲ್ಲಿ ಏಕೋ ಶಂಕೆಯಿತ್ತು. ಕಾತರತೆಯೂ.

''ಒಂದು ಮಾತನ್ನು ನಿನ್ನ ಪುತ್ರ ವಧುಗಳು ನಡೆಸಲಿ!''

''ತಲೆಯಿಂದ ಹೊತ್ತು ನಡೆಸುತ್ತಾರೆ. ನಿನ್ನ ಯಾವ ಆದೇಶವೂ ಅವರಿಗೆ ಮಾನ್ಯ.''

''ಒಂದು ವರುಷ ನನ್ನ ಬಗ್ಗೆ ಸರಿಯಾದ ಭಾವನೆ ಬೆಳೆಸಿಕೊಳ್ಳಲಿ. ನಾನು ಸಂತಾನ ಕರುಣಿಸುವವ ಎಂಬ ನಿಶ್ಚಿಂತತೆ ಅವರಿಗೆ ಬೆಳೆಯಲಿ. ಅವರು ಅನುಮದನ ವ್ರತ ಪೂರ್ತಿಗೊಳಿಸಲಿ. ಇಂದಿನಿಂದ ಸರಿಯಾಗಿ ಒಂದು ವರುಷದ ನಂತರ ನಾನು ಹಸ್ತಿನಾವತಿಗೆ ಬಂದು ನಿಯೋಗ ವಿಧಿ ಪೂರೈಸುತ್ತೇನೆ......''

ನನ್ನ ಮೈ ಬೆವತಿತು. ತಾಯಿಗೂ ಅದು ಸ್ವಲ್ಪ ನಿರಾಶೆಗೆ ಎಡೆಯಾಡಿತ್ತು. ಆದರೂ ಅವಳಿಗೆ ನನ್ನ ಮಾತಿನಲ್ಲಿ ವಿಶ್ವಾಸವಿತ್ತು.

''ಆಗಲಿ ನಿನ್ನಿಷ್ಟ''

ನಾನು ತಾಯಿಯನ್ನು ನಮಸ್ಕರಿಸಿ ಬೀಳ್ಕೊಟ್ಟೆ.

# ಚಂದ್ರ ವಂಶೋದ್ಧಾರ

ತಾಯಿ ಹೊರಟು ಹೋದಳು. ನಾಳೆ ಉದಯದ ಮುನ್ನವೇ ನಾನು ಪ್ರಯಾಣ ಹೊರಡುವುದು ನಿಶ್ಚಯವಾಗಿತ್ತು. ಆ ಬಗ್ಗೆ ಸಾರಥಿಗೆ ರಥವನ್ನು ಸಿದ್ಧವಾಗಿಡುವಂತೆ ಆದೇಶಿಸಲಾಯಿತು. ವ್ಯಾಘ್ರಾಸನದ ಮೇಲೆ ನಾನು ಹೊರಳಾಡುತ್ತಿರುವಂತೆಯೆ ನನ್ನನ್ನು ನೆನೆಸಿದ ವಿಚಾರಗಳು ಪೂರ್ತಿಯಾಗಿ ಸೆಳೆದುಕೊಂಡವು ನಾನು ಪ್ರವಾಹ ಪತಿತನಾದೆ.

ನಾನು ತನ್ನ ಮಗನೆಂದು ತಾಯಿ ಭೀಷ್ಮನಿಗೆ ಹೇಳಿದಳೆ ?

ಅವಳ ಹೆಸರು ಸತ್ಯವತಿ ಅಲ್ಲವೆ?

ನಾನು ಅವಳಿಗೆ ಕನ್ಯಾ ಪುತ್ರ ಎಂಬುದು ಭೀಷ್ಮನಿಗೆ ತಿಳಿದಾಗ ತನ್ನ ತಾಯಿಯ ಬಗ್ಗೆ ಇದ್ದ ಅವನ ಗೌರವ ಹಾಗೆಯೇ ಉಳಿಯಿತೆ? ಮೊದಲು ನನ್ನ ಬಗ್ಗೆ ಏನೋ ಭಾವಿಸಿದ ಆತನಿಗೆ ನನ್ನ ತಾಯಿ ತನ್ನ ಮಗನೆಂದು ಹೇಳಿದ ಬಳಿಕ ಆ ಮೊದಲಿನ ಆದರ ಅಭಿಮಾನಗಳು ಉಳಿಯುವುದೇ?

ಭೀಷ್ಮನ ಬಗ್ಗೆ ನನಗೆ ವಿಪುಲವಾದ ಆದರ ಹುಟ್ಟಿತ್ತು. ಒಂದು ಗಳಿಗೆಯ ಸಂದರ್ಶನದಲ್ಲಿಯೆ ಆತ ನನ್ನ ಮೇಲೆ ಅಳಿಸಲಾರದ ವರ್ಚಸ್ಸು ಬೀರಿದ್ದ. ತಾಯಿಗೆ ಭೀಷ್ಮನ ಮೇಲೆ ಅಮಿತ ವಿಶ್ವಾಸ! ಇರದೆ ಏನು ? ಆತನ ತ್ಯಾಗ, ತಾಯಿಯನ್ನು ಕೃತಜ್ಞಳನ್ನಾಗಿ ಮಾಡಿದ್ದು ಅಚ್ಚರಿಯಲ್ಲ. ಬೆಸ್ತರ ಕೇರಿಯಲ್ಲಿ ಬೆಳೆದ ಒಬ್ಬ ಹೆಣ್ಣು ಮಗಳನ್ನು ರಾಣಿ ಎಂದು-ತಾಯಿ ಎಂದು ಮನ್ನಿಸಿ ಅವಳ ಸೇವೆಯನ್ನು ಸರ್ವ ವಿಧದಿಂದ ಮಾಡುವಾಗ ತಾಯಿಗೆ ಭೀಷ್ಮನಲ್ಲಿ ಅಪಾರ ಗೌರವ ಇದ್ದುದು ಆಶ್ಚರ್ಯವಲ್ಲ.

ಭೀಷ್ಮನೆಷ್ಟು ದೊಡ್ಡ ಮನುಷ್ಯ! ತಾನು ನಿಯೋಗ ವಿಧಿಗೆ ಒಪ್ಪಲಾರದಾದಾಗ ತಾಯಿ ತನ್ನ ಹಿಂದಿನ ಕತೆ ಹೇಳಿರಬೇಕು.

ನನಗೂ ಒಬ್ಬ ಮಗನಿದ್ದಾನೆಂದು ಹೇಳಿದಳೆ ?

ತಾಯಿ ಸತ್ಯಶೀಲಳು. ತನ್ನ ಪತಿಯ ಮಗನಾದ ದೇವವ್ರತ ಅನುಮತಿಸದಿದ್ದರೆ ಶಮ್ಯಾಶ್ರಮದವರೆಗೆ ದೂತನನ್ನು ಕಳಿಸುತ್ತಿದ್ದಳೆ ? ಧರ್ಮ ಒಪ್ಪದ್ದನ್ನು ತಾಯಿ ಎಂದೂ ಜರುಗಿಸಲಾರಳು.

ನಾನು ಸಹೋದರನೆಂದೂ ತನ್ನ ತಾಯಿ ಮಗನೆಂದೂ ಭೀಷ್ಮನಿಗೆ ಗೊತ್ತಾಯಿತು.

ವಿಚಿತ್ರ ವೀರ್ಯನಿಗೆ?

ಗೊತ್ತಾಗಿರಲೇಬೇಕು. ಅವನ ಅನುಮತಿ ಇಲ್ಲದೆ ನಾನು ಅವರ ಹತ್ತಿರ ನಿಯೋಗ ವಿಧಿ ಸಾಂಗಗೊಳಿಸಲು ಶಾಸ್ತ್ರ ಅನುಮತಿ ನೀಡುವುದಿಲ್ಲ. ವಿಚಿತ್ರ ವೀರ್ಯನಿಗೆ ಈ ಮಾತು ತಿಳಿಯಿತೇ?

ತನ್ನ ತಂದೆಯ ಮಗ ನಿಯೋಗ ವಿಧಿಗೆ ಒಪ್ಪಲಿಲ್ಲ. ಅಂತೆಯೇ ತಾಯಿ ತನ್ನ ಮಗನನ್ನು ಕರೆಸಿಕೊಂಡಿದ್ದಾಳೆಂದು.

ನಾನು ಮಾಡಿದ ತೀರ್ಮಾನದಿಂದ ಸಮಸ್ಯೆ ಬಗೆಹರಿಯಲಿಲ್ಲ. ನನ್ನ ಕೃತಿ ನನ್ನ ಸೋಲಿನ ಸ್ಪಷ್ಟ ನಿದರ್ಶನವಾಗಿತ್ತು. ಆದರೆ ನಾನು ಒಂದನ್ನು ಮಾತ್ರ ಮಾಡಿದ್ದು ಒಳಿತು ಎನಿಸಿತು. ವಿಚಿತ್ರವೀರ್ಯನ ಹೆಂಡಂದಿರು ನನ್ನನ್ನು ಅಂಗೀಕರಿಸಲು ಬೇಕಾಗುವ ಶಕ್ತಿ ಸಂಪಾದಿಸಲು ವ್ರತ ಮಾಡಲು ಹೇಳಿದ್ದು.

ಬೆಳಗಾಯಿತು. ಸಾರಥಿ ರಥವನ್ನು ತಂದು ನಿಲ್ಲಿಸಿದ್ದ. ನಾನು ಬೆಳಗಿನ ಕಾರ್ಯಕ್ರಮಗಳನ್ನೆಲ್ಲ ಪೂರೈಸಿ ಸಿದ್ಧನಾಗಿದ್ದೆ. ತಾಯಿ ಬಂದಳು. ನಾನು ಅವಳ ಅನುಮತಿ ಪಡೆದು ಹೊರಡಬೇಕು. ತಾಯಿ ಇದ್ದಕ್ಕಿದ್ದಂತೆಯೆ ಸ್ವಲ್ಪ ಬಿರುಸಿನಲ್ಲಿಯೆ ಹೇಳಿದಳು.

'' ಇಂದು ನೀನು ಪ್ರಯಾಣ ತಡೆಯಬೇಕು.''

ತಾಯಿಯ ಧ್ವನಿಯಲ್ಲಿ ನಿಶ್ಚಿತತೆ ಇದ್ದರೂ ದೈನ್ಯವೂ ತುಂಬಿತ್ತು. ನಾನು ಆತುರಗೊಂಡು ಕೇಳಿದೆ.

27393

''ಏಕೆ--ಅಂತಹುದೇನು ಘಟಿಸಿತು ಈಗ?''

''ನೀನು ನಿಯೋಗವನ್ನು ಮುಗಿಸಿಕೊಂಡು ಹೊರಡು. ಹಾಗೆಯೇ ಹೋಗಬೇಡ. ಇದು ನಿನ್ನ ತಾಯಿಯ ಬೇಡಿಕೆ. ನಡೆಸಿಕೊಡುವುದು ನಿನ್ನ ಇಷ್ಟ''

ನನ್ನ ತಾಯಿ ನಿನ್ನೆ ಆದ ತೀರ್ಮಾನವನ್ನು ಬದಲಿಸುವ ವಿಚಾರ ಏಕೆ ಮಾಡಿದಳೋ ನನಗೆ ಅರ್ಥವಾಗಲಿಲ್ಲ.

''ನಿನ್ನ ಪುತ್ರ ವಧುಗಳು ನನ್ನ ಶಕ್ತಿ ಸಾಮರ್ಥ್ಯಗಳನ್ನು ಗ್ರಹಿಸಲೆಂದೇ ಅವರಿಗೆ ವ್ರತ ಮಾಡಲು ಹೇಳಿದ್ದು, ಅವರು ಸಮರ್ಥರಾಗದೆ ನಿಯೋಗ ಹೇಗೆ ಪೂರೈಸುವುದು?''

''ಒಂದು ವರುಷ ರಾಜಕೀಯ ಜೀವನದಲ್ಲಿ ಏನು ಸ್ಥಿತ್ಯಂತರ ಘಟಿಸುವುದೋ ಹೇಳಲಾಗದು. ನೇಮದ್ದಲ್ಲ. ಅದಕ್ಕಾಗಿ ನೀನು ಈಗಲೇ ನನ್ನ ಪುತ್ರವಧುಗಳಲ್ಲಿ ವಿಧಿ ತೀರಿಸುವುದು ಸೂಕ್ತ!'' ನನ್ನ ತಾಯಿ ವ್ಯರ್ಥವಾಗಿ ಅವಸರ ಮಾಡುತ್ತಾಳೆಂದು ನನಗೆ ಅನಿಸಿತು. ನನಗೆ ಹೊಳೆಯದ ಆತಂಕಗಳು ಅವಳನ್ನು ತಡೆದಿರಬೇಕು. ನಿನ್ನೆ ಅನುಮತಿಸಿದವಳು ಇಂದು ಈಗಲೇ ಆಗಲಿ ಎಂದು ಆಗ್ರಹಪಡಿಸುತ್ತಿದ್ದಾಳೆ.

''ಅವಸರ ಯೋಗ್ಯವಲ್ಲ. ನನ್ನ ಮೇಲೆ ಭಾರ ಹಾಕಿ ನಿಶ್ಚಿಂತಳಾಗಿರು......''

''ನಿನಗೆ ರಾಜಕೀಯ ಜೀವನದ ಏರಿಳಿತಗಳ ಅಬ್ಬರ ಕಾಣದು. ನಿನ್ನದು ಸಾಧು ಜೀವನ. ಪ್ರಜರ ಜೀವಿತದಲ್ಲಿ ಹಲವು ವರುಷದಲ್ಲಿ ಆಗುವ ಘಟನೆ ರಾಜರ ಜೀವಿತದಲ್ಲಿ ಜರುಗಿ ಹೋಗಲು ಹಲವು ನಿಮಿಷಗಳೂ ಬೇಕಿಲ್ಲ. ರಾಜರ ಜೀವಿತದಲ್ಲಿ ಕ್ಷೇಮ ಎನ್ನುವುದು ಗಾಳಿಯಲ್ಲಿಯ ದೀಪ! ನಾನು ಹೆಂಗುಸು, ನಿನಗೆ ಕಾಣದ ಭಯಗಳು ನನ್ನ ಹತ್ತಿರವೇ ಸುಳಿದು ನನ್ನನ್ನು ಹೆದರಿಸುತ್ತಿವೆ. ನನ್ನ ಮಾತು ನಡೆಸಿ ಹೋಗು.''

ನನ್ನ ತಾಯಿಯ ಆಗ್ರಹ ಪ್ರಬಲವಾಯಿತು. ಒಂದು ವರುಷದ ನಂತರ ಆಗುವ ನಿಯೋಗ ಇಂದಾದರೆ ಏನು ನಷ್ಟ?

ನಷ್ಟವಾಗದೆ ಏನು ?

ಸಂತಾನ ಸಮರ್ಥವೇ ಆಗುವುದಿಲ್ಲ. ಏಕೆಂದರೆ ಪಾಪ, ನನ್ನ ತಾಯಿಯ ಪುತ್ರ ವಧುಗಳು ಅರಮನೆಯ ವಾತಾವರಣದಲ್ಲಿ ಬೆಳೆದ ಹೆಣ್ಣು ಮಕ್ಕಳು . ಅವರಿಗೆ ಸಂತಾನಾಪೇಕ್ಷೆ ಇದೆ. ತಮ್ಮ ಹೊಟ್ಟೆಯಿಂದ ಮಕ್ಕಳಿಲ್ಲ ಎಂಬ ಕೊರಗೂ ಇದೆ. ಆದರೆ......

ನಿಯೋಗ ವಿಧಿಯಲ್ಲಿ ಅವರು ನನ್ನನ್ನು ಮುಕ್ತ ಮನಸ್ಸಿನಿಂದ ಸ್ವಾಗತಿಸುವರೆ? ನಾನು ಪಡೆದ ಸಂಸ್ಕಾರ ಅವರಿಗಿದೆಯೇ? ಅದು ಹೇಗೆ ಸಾಧ್ಯ?

ಅವರು ಎಷ್ಟೇ ಮನಸ್ಸನ್ನು ಗಟ್ಟಿ ಮಾಡಿಕೊಂಡರೂ, ಸಂತಾನ ವಿಹೀನತೆ ಎಷ್ಟೇ ಕ್ರೂರವಿದ್ದರೂ ನನ್ನನ್ನು ವಿಚಿತ್ರವೀರ್ಯನೆಂದೇ ಭಾವಿಸುವುದಾದೀತೆ?



ಶಕ್ಯವಿಲ್ಲ. ಇಂತಹ ಭಾವನಾ ಘನತೆ, ಪಾಪ! ಏನೂ ಅರಿಯದ ಮುಗ್ಧ ರಾಣಿಯರಿಗೆ ಹೇಗೆ ಬಂದೀತು ? ಅಂತೆಯೆ, ಅವರು ವ್ರತ ಮಾಡಿ ಮನಸ್ಸನ್ನು ನನ್ನ ಬಗ್ಗೆ ಅಣಿಗೊಳಿಸಲಿ ಎಂದಿದ್ದೆ. ಈಗ ಏನು ?

ಅವರ ಮನಸ್ಸು ನನ್ನ ಬಗ್ಗೆ ಆಕರ್ಷಿತವಾಗುವಂತೆ ನಾನೇಕೆ ಶಕ್ತಿಪಾತ ಮಾಡಬಾರದು ?

ಇಂದು ಅವರಿಗೆ ನನ್ನನ್ನು ಕಂಡರೆ ಭಯ- ಅಲ್ಲದೆ- ನಾನು ಅವರ ''ಭಾವ'' ಎಂಬ ಸಂಕೋಚ. ಇದಕ್ಕಿಂತ ಹೆಚ್ಚಿನ ಸತ್ವವನ್ನು ಅವರು ನನ್ನಲ್ಲಿ ಕಾಣಲೇ ಇಲ್ಲ. ಶಕ್ತಿಪಾತ ಹೇಗೆ?

ನನ್ನ ಮೌನ ತಾಯಿಯನ್ನು ಹೆದರಿಸಿತು. ಅವಳು ನನ್ನ ಹತ್ತಿರ ಬಂದು ಪಾದಗಳನ್ನು ಗಟ್ಟಿಯಾಗಿ ಹಿಡಿದು ಹಣೆ ಹಚ್ಚಿ ಹೇಳಿದಳು.

''ನೀನು ಮಗನಾದರೂ ಮಹರ್ಷಿ! ನನಗೆ ವಂದ್ಯ, ಪೂಜ್ಯ. ನನ್ನ ಪುತ್ರ ವಧುಗಳಿಗೆ ಸಂತಾನ ನೀಡು...'' ನನ್ನ ತಾಯಿ ದೈನ್ಯ ಕಣ್ಣ ಹನಿಯಲ್ಲಿ ಹರಿಯಿತು.

ನಾನು ಹೇಳಿದೆ- ''ಆಗಲಿ'', ನಿನ್ನ ಇಷ್ಟ. ಮನುಷ್ಯ ತನ್ನ ಆಗ್ರಹದಿಂದ ಕಾಲದ ಸಂಕಲ್ಪವನ್ನೇ ಪೂರ್ತಿಗೊಳಿಸುತ್ತಾನೆ. ರಾಜ ಪುರೋಹಿತರಿಗೆ ಪ್ರಶಸ್ತ ದಿನವನ್ನು ಗೊತ್ತುಪಡಿಸಲು ಹೇಳು. ನನಗೆ ಆದಷ್ಟು ತೀವ್ರ ಆಶ್ರಮಕ್ಕೆ ಹೋಗುವ ಹಾಗೆ ಮಾಡು.....''

ತಾಯಿಗೆ ಗೆಲುವಾಗಿತ್ತು. ಚಿಂತೆಯ ಹೆಮ್ಮೋಡ ಕವಿದ ಅವಳ ಮೊಗದಲ್ಲಿ ಸಂತೋಷದ ಚಂದ್ರ ಕೋರೆಯಾಗಿ ಕಾಣಿಸಿಕೊಂಡ.

ಒಂದೆರಡು ದಿನ ಕಳೆದವು. ಶಮ್ಯಾಶ್ರಮ ನನ್ನನ್ನು ಕರೆಯುತ್ತಿತ್ತು. ಹೋಗದಂತೆ ಹಸ್ತಿನಾವತಿ ಬಂಧಿಸಿತ್ತು. ಎರಡು ದಿನ ಭೀಷ್ಮನೊಡನೆ ಅನೇಕ ವಿಷಯಗಳನ್ನು ಮಾತನಾಡಿದೆ. ರಾಜ್ಯಕ್ಕೆ, ಧರ್ಮಕ್ಕೆ ತಪಸ್ವಿಗಳು ಮಾಡಬೇಕಾದ ಕೆಲಸ ತುಂಬ ಇದೆ ಎಂದು ಭೀಷ್ಮನ ಅಭಿಪ್ರಾಯವಾಗಿತ್ತು.

ತಪಸ್ವಿಗಳು ಏಕಾಂತ ಪ್ರಿಯರಾದರೆ, ಕೇವಲ ಆನಂದ ಬ್ರಹ್ಮಗಳೇ ಅವರ ಗುರಿಗಳಾದರೆ ಜಗತ್ತು ಅನರ್ಥದ ರಂಗಮಂದಿರವಾಗುವುದು ಎಂದು ಭೀಷ್ಮನ ಹೆದರಿಕೆ.

''ತಪಸ್ವಿಗಳು ಕೇವಲ ಕಾಡು ಸೇರಿದರೆ, ಇಲ್ಲ, ಒಳ್ಳೆಯ ರಾಜರನ್ನು ಕಾಡಿಗೆ ಕರೆದರೆ, ಇನ್ನು ಹಲವಾರು ಶತಮಾನಗಳಲ್ಲಿ ಯಾರಿಗಾಗಿ ತಪಸ್ಸಿದೆಯೊ ಆ ಜನವೆ, ಆ ಜಗತ್ತೇ ನಾಮಾವಶೇಷವಾಗುತ್ತದೆ. ತಪಸ್ಸು ಆಧ್ಯಾತ್ಮ ಸರ್ವರ ಸುಖಕ್ಕಾಗಿಯೆ ಅಲ್ಲವೆ? ಸರ್ವವೂ ನಾಶವಾದ ಬಳಿಕ, ಇಲ್ಲವೆ ಇನ್ನು ಏಳಲಾರದಂತೆ ಜಗತ್ತು ಕುಸಿದ ಬಳಿಕ, ಅದರ ಉದ್ಧಾರದ ಯತ್ನ ವ್ಯರ್ಥ ಸಾಹಸವೇ ಅಲ್ಲವೆ ?''

ಭೀಷ್ಮನ ವಿಚಾರ ಸರಣಿ ಅವನ ದೃಷ್ಟಿಯಿಂದ ಯೋಗ್ಯವೇ ಆಗಿತ್ತು. ಪ್ರತಿಯೊಂದು ಸಂಗತಿಯನ್ನು ಆತ ರಾಜಕೀಯ ಅಳತೆಗೋಲಿನಿಂದಲೇ ಅಳೆಯುತ್ತಿದ್ದ. ಆದರೂ ಆತನಿಗೆ ಪ್ರಚಂಡ ಸಂಸ್ಕಾರವಿತ್ತು. ರಾಜಕೀಯ ಪರಿಶುದ್ಧವಾಗಿರಬೇಕು. ಅದರಲ್ಲಿ ದೈವೀ ಪ್ರಭಾವವಿರ ಬೇಕು ಎಂಬುದಾಗಿ ಆತನ ಅಭಿಲಾಷೆ. ಅದೆಲ್ಲ ಅವನಿಗೆ ಗುರುಗಳಾದ ಪರುಶುರಾಮರಿಂದ ಬಂದ ಅನುಗ್ರಹವಾಗಿತ್ತು.

ನನ್ನ ತಾಯಿಗೆ ನಾನು ನಿಯೋಗದ ಬಗ್ಗೆ ಕೆಲವು ನಿಷ್ಠುರ ನಿಯಮಗಳನ್ನು ತಿಳಿಸಿದ್ದೆ. ಯಾವುದಕ್ಕೂ ಅವಳು ನನ್ನ ಇಚ್ಛೆಗೆ ವಿರೋಧವಾಗಿ ವರ್ತಿಸಿರಲಿಲ್ಲ. ನನ್ನ ಮನಸ್ಸು ನೊಂದೀತೆಂದು ತಾಯಿ ಹೆದರುತ್ತಲಿದ್ದಳು.

ವಿಚಿತ್ರವೀರ್ಯನ ಹಿರಿಯ ಹೆಂಡತಿ ಅಂಬಿಕೆ. ನನಗೆ ತಾಯಿ ಆ ದಿನ ಬಂದು ಹೇಳಿದಳು. ರಾಜಪುರೋಹಿತರು ಈ ದಿನ ಪ್ರಶಸ್ತವೆಂದು ಹೇಳಿದ್ದಾರೆ. ಅಂಬಿಕೆ ಇಂದು ಋತುಸ್ನಾತಳು. ದಾನ ದಕ್ಷಿಣಾದಿ ನಿಯಮಗಳನ್ನೆಲ್ಲ ಆಕೆ ಪೂರೈಸಿದ್ದಾಳೆ.

ನಾನು ಈ ವಿಷಯದಲ್ಲಿ ಬಹಳ ಚಿಂತೆ ಮಾಡಬೇಕಿದ್ದಿಲ್ಲ. ಯೋಗದ ಪ್ರಥಮ ಪಾಠಗಳಲ್ಲಿ ಇಂತಹ ಮನಸ್ಥಿತಿಯನ್ನು ನಾನು ಹಲವು ಸಲ ಅಭ್ಯಸಿಸಿದ್ದೆ. ಕಾರ್ಯಕ್ಕೆ ಬೇಕಾಗುವ

ಮಾನಸಿಕ ಶಕ್ತಿಯನ್ನು ಉಪಯೋಗಿಸಿ ಆ ನಂತರ ಮನಸ್ಸನ್ನು ಮೊದಲಿನ ನಿರ್ಲಿಪ್ತ ಭೂಮಿಕೆಗೆ ತರುವುದು ನನಗೆ ಅಲ್ಪ ಶ್ರಮದ್ದಾಗಿತ್ತು.

ಶಯ್ಯಾಗೃಹವನ್ನೆಲ್ಲ ತಾಯಿ ಸ್ವತಃ ನಿಂತು ಅಣಿಗೊಳಿಸಿದಳು. ಅವಳು ತನ್ನ ಪುತ್ರವಧುವಿಗೆ ಸ್ತಿಮಿತತೆಯನ್ನು, ಧೈರ್ಯವನ್ನು ಕೊಡುವಲ್ಲಿ ಅವಿರತ ಪ್ರಯತ್ನಿಸಿದಳು. ತಾಯಿ ಶಯ್ಯಾಗೃಹದಲ್ಲಿ ಅವಳನ್ನು ಮಂಚದ ಮೇಲೆ ಕೂರಿಸಿ ಧೈರ್ಯದ ಮಾತುಗಳನ್ನು ಹೇಳಿದಳು.

ರಾತ್ರಿ ಮಹಾನಿಶೀಥ ಮೀರಿತ್ತು. ಶಯ್ಯಾಗೃಹದಲ್ಲಿ ಚಿನ್ನದ ಸಮೆಯಲ್ಲಿ ದೀಪ ಉರಿಯುತ್ತಿತ್ತು. ಪುಷ್ಪ ಶಯ್ಯೆಯಲ್ಲಿ ಅಂಬಿಕೆ ಕುಳಿತು ಪ್ರತೀಕ್ಷೆಯಲ್ಲಿದ್ದಳು. ಬಾಗಿಲ ಜವನಿಕೆಯನ್ನು ಸರಿಸಿ ನಾನು ಮೆಲ್ಲಗೆ ಒಳಗೆ ಕಾಲಿಟ್ಟೆ! ಅವಳು ಚಂಗನೆ ಮಂಚದಿಂದ ಎದ್ದು ನಿಂತಳು. ಒಂದು ಕ್ಷಣ ಚಕಿತಳಾಗಿ ನನ್ನನ್ನು ನೋಡಿದವಳೇ ಕಣ್ಣು ಮುಚ್ಚಿ ಚಿಟ್ಟನೆ ಚೀರಿದಳು.

ನಾನು ಮುಂದೆ ಹೋಗಿ ಅವಳನ್ನು ಸಂತೈಸುತ್ತ ಹೇಳಿದೆ.

''ಅಂಬಿಕೆ- ಭೀತಳಾಗಬೇಡ, ಮನಸ್ಸಿನ ದುಗುಡ ತೆಗೆದುಹಾಕು. ಈ ಕ್ಷಣ ನಾನು ನಿನ್ನವನೆಂದು ಭಾವಿಸು''

ನನ್ನ ಆಶ್ವಾಸನವನ್ನು ಅವಳು ನಂಬಿದ್ದರೂ ಅವಳಿಗೆ ತನ್ನ ಮನಸ್ಸಿನ ಸಂಕೋಚ ಬಿಡುವುದಾಗಲಿಲ್ಲ. ನಾನು ಬಹಳ ಪರಿಶ್ರಮಿಸಿದೆ. ಅವಳು ನನ್ನನ್ನೊಮ್ಮೆ ವಿಲಾಸಭರ ದೃಷ್ಟಿಯಿಂದ ನೋಡಬೇಕು ಎಂದು ನನ್ನ ಇಚ್ಛೆಯಿತ್ತು. ಆದರೆ ಆಗಲಿಲ್ಲ. ಹೋಗಲಿ ಎಂದು ನಾನು ನನ್ನ ಎಲ್ಲ ಅವಸ್ಥೆಯನ್ನೂ ಮರೆತು ಕೇವಲ ಅವಳ ಪತಿಯ ಪದವಿಯಲ್ಲಿ ನಿಂತೆ.

ಅವಳಿಗೆ ಭಯ ನೀಗಲಿಲ್ಲ. ಮುಚ್ಚಿದ ಕಣ್ಣು ತೆರೆಯಲಿಲ್ಲ.

ಇಡಿ ರಾತ್ರಿಯನ್ನು ಅವಳು ಹಾಗೆಯೆ ಕಳೆದಳು. ಬೆಳಗಿನಲ್ಲಿ ನಾನು ಶಯ್ಯಾಗಾರದಿಂದ ಹೊರಟು ಹೋದೆ.

ಸಾಯಂಕಾಲದಲ್ಲಿ ತಾಯಿ ಸತ್ಯವತಿ ನನ್ನ ಬಿಡಾರಕ್ಕೆ ಬಂದಳು.

''ಮಗು ನಿನಗೆ ಕಲ್ಯಾಣವಾಗಲಿ. ನನ್ನ ವಂಶದ ದೀಪವನ್ನು ಆರದಂತೆ ಬೆಳಗಿಸಿದಿ. ಸಂತೋಷವಾಯಿತು'' ತಾಯಿಗೆ ತನ್ನ ಆಶೆ ಫಲಿಸಿದ್ದು ಕಂಡು ಹಿಗ್ಗಾಗಿತ್ತು. ಆದರೆ ನಾನು ಅವಳಿಗೆ ಸ್ಪಷ್ಟವಾಗಿ ಹೇಳಬೇಕಾಗಿದ್ದುದನ್ನು ಹೇಳಿದೆ.

'' ನೀನು ಎಲ್ಲದಕ್ಕೂ ಆತುರ ಪಟ್ಟಿದ್ದೀ. ನಾನು ನಿನಗೆ ಮೊದಲೇ ಹೇಳಿರಲಿಲ್ಲವೆ? ನಿನ್ನ ಪುತ್ರ ವಧು ನನ್ನ ವಿಷಯದಲ್ಲಿ ಮನಸ್ಸನ್ನು ಹದ ಮಾಡಿಕೊಳ್ಳಲಿ ಎಂದು''

''ಈಗ ಏನಾಯಿತು ? ಅವಳು ನಿನಗೆ ಅನುಕೂಲಳಾಗಿರಲಿಲ್ಲವೆ ?''

ತಾಯಿಯ ಧ್ವನಿಯಲ್ಲಿ ಕಾತರತೆ ಇತ್ತು. ತನ್ನ ಪುತ್ರ ವಧು ಕ್ರಮ ತಪ್ಪಿದಳೇನೋ ಎಂಬ ಶಂಕೆಯಿಂದ ಅವಳು ಅಧೀರಳಾಗಿದ್ದಳು. ನಾನು ಶಯ್ಯಾಗೃಹದಲ್ಲಿ ಅಂಬಿಕೆಯ ಆಚರಣೆಯನ್ನು ಹೇಳಿ ಇದೆಲ್ಲ ನಿನ್ನ ಅವಸರದ ಪರಿಣಾಮ ಎಂಬುದನ್ನೂ ತಿಳಿಸಿದೆ.

''ಇದರ ಫಲವೇನು ?''

''ಅಂಬಿಕೆಯ ಸಂತಾನಕ್ಕೆ ಕಣ್ಣು ಇಲ್ಲದೆ ಹೋಗಬಹುದು.''

ತಾಯಿ ಹೆದರಿ ನಡುಗಿದಳು. ಪ್ರಮಾದವಾಯಿತು. ಇನ್ನೇನು ಗತಿ ಎಂದು ಮಿಡುಕಿದಳು. ಅವಳು ಕ್ಷಣ ಹೊತ್ತು ಮೂಕಳಾಗಿ ಬೊಂಬೆಯಂತೆ ಕುಳಿತಳು.

''ಇನ್ನೊಂದು ಮಾತು ನಿನ್ನ ಕೇಳಲೆ--?''

''ಅಗತ್ಯವಾಗಿ''

ನನ್ನ ತಾಯಿ ಬಹಳ ವಿವರ್ಣಳಾಗಿದ್ದಳು. ಅತ್ಯಂತ ಶೀರ್ಣ ಧ್ವನಿಯಲ್ಲಿ, ವಿಚಿತ್ರ ವೀರ್ಯನ ''ಕುರುಡು ಮಗನಿಂದ ಸಾಮ್ರಾಜ್ಯ ನಿರ್ವಹಣೆ ಸಾಧ್ಯವೆ--?''

''ಕಾಲದ ಪ್ರಬಲ ಸಂಕಲ್ಪ ಮೀರುವುದು ಅಶಕ್ಯದ ಮಾತು''

''ನೀನು ಇನ್ನೊಂದು ಮಾತು ನಡೆಸಿ ಕೊಟ್ಟರೆ ನಿನ್ನ ತಾಯಿ ನಿನಗೆ ತುಂಬ ಋಣಿ....''

''ಏನು ಆಜ್ಞಾಪಿಸಬೇಕು.''

''ವಿಚಿತ್ರವೀರ್ಯನಿಗೆ-- ಇಬ್ಬರು ಪತ್ನಿಯರಲ್ಲವೆ? ಅಂಬಾಲಿಕೆಗೆ ಒಂದು ಸಂತಾನವನ್ನು ಕರುಣಿಸು, ಅವನಾದರೂ ಸಮ್ರಾಟ್ ಲಕ್ಷಣ ಸಂಪನ್ನನಾಗಲಿ.''

ತಾಯಿಯಲ್ಲಿ ಸಾಮಾನ್ಯ ಸ್ತ್ರೀಯ ಚಾಪಲ್ಯ ಇಣುಕಿದ್ದನ್ನು ಕಂಡು ನನಗೆ ಅದನ್ನು ನಿರಾಕರಿಸುವ ಧೈರ್ಯವಾಗಲಿಲ್ಲ. ಆದರೂ ಅವಳಿಗೆ ಇದ್ದುದರಲ್ಲಿಯೆ ಸ್ಪಷ್ಟವಾಗಿ ತಿಳಿಸಿದೆ.

''ಶಾಸ್ತ್ರಧರ್ಮ ಏಕಸಂತಾನವನ್ನು ಮಾತ್ರ ಅನುಮತಿಸುತ್ತದೆ. ಇನ್ನೊಂದು ಸಂತಾನ ಸ್ತ್ರೀ ವ್ಯಾಮೋಹದ ದೋಷಕ್ಕೆ ಒಳಗಾದ ಮಾತಾಗುವುದು. ದಯವಿಟ್ಟು ನನ್ನನ್ನು ಒತ್ತಾಯಪಡಿಸಬೇಡ.''

ತಾಯಿ ಕೇಳಲಿಲ್ಲ. ಹಟ ತೊಟ್ಟಳು. ನಾನು ಅಸ್ತು ಎನ್ನದೆ ವಿಧಿ ಇರಲಿಲ್ಲ. ಒಂದು ದಿನ ಅಂಬಿಕೆಯಿಂದಾದ ಪ್ರಮಾದ ತನ್ನ ಎರಡನೆಯ ಪುತ್ರ ವಧುವಿನಿಂದಾಗದಿರಲಿ ಎಂದು ಸಾಕಷ್ಟು ಎಚ್ಚರ ವಹಿಸಿಯೂ ವಿಫಲಳಾದಳು. ಅಂಬಿಕೆಗಾದ ಅನುಭವವೇ ಅಂಬಾಲಿಕೆಗೆ - ಆದರೆ ಇವಳು ಶಯ್ಯಾಗೃಹದಲ್ಲಿ ನನ್ನನ್ನು ನೋಡಿ ಕಣ್ಣು ಮುಚ್ಚಲಿಲ್ಲ. ಅಧೀರಳಾದಳು, ಭೀತಳಾದಳು.

ಭೀತಿಯಿಂದ ಇವಳ ಮುಖ ಬಿಳುಪೇರಿತು. ನನ್ನ ಯಾವ ಆಶ್ವಾಸವೂ ಅವಳಲ್ಲಿ ಸ್ಥಿಮಿತತೆ ತರಲಿಲ್ಲ.

ನಾನು ಮರು ದಿನ ತಾಯಿಗೆ ಸ್ಪಷ್ಟವಾಗಿ ಈ ಮಾತು ಹೇಳಿದೆ--

''ಅಂಬಿಕೆಯ ಮಗ ಕುರುಡನಾದರೆ-- ಅಂಬಾಲಿಕೆಯ ಕುಮಾರ ಪಾಂಡುರೋಗ ಪೀಡಿತನು--ನಿನ್ನ ಪುತ್ರ ವಧುಗಳ ಯೋಗ್ಯತೆಯೇ ಅಷ್ಟು. ನಾನು ಮಾಡುವುದೇನು--?''

ತಾಯಿ ವ್ಯಸನಾಕ್ರಾಂತಳಾದಳು. ತಾನು ಮಾಡಿದ ಯತ್ನವೆಲ್ಲ ನಿಷ್ಫಲವಾಯಿತೆಂದು ಅವಳು ಮರುಗಿದಳು.

ಒಂದು ದಿನ ನಾನು ಊರಿಗೆ ಹೊರಟು ನಿಂತೆ. ತಾಯಿ ಅನುಮತಿಸಿದಳು. ನಾನು ನಮಸ್ಕಾರ ಮಾಡಲು ಹೋದೆ.

''ಇನ್ನೊಂದು ಮಾತು ನಡೆಸಿ ಕೊಡು.''

ನನ್ನ ತಾಯಿ ನನ್ನನ್ನು ಹಿಗ್ಗಾ ಮುಗ್ಗಾ ಎಳೆದ ಅನುಭವವಾಗಿತ್ತು. ಆಗದು ಎಂದು ಹೇಳಬೇಕೆಂದು ನಾಲಗೆ ತುದಿಯವರೆಗೆ ಬಂದಿತ್ತು. ಆದರೆ ಅಷ್ಟು ನಿಷ್ಠುರತೆ ಬರಲಿಲ್ಲ.

''ಏನು ಮಾತು--?''

''ನೀನು ಚಂದ್ರವಂಶಕ್ಕಾಗಿ ಇಬ್ಬರು ಕುಮಾರರನ್ನು ಕರುಣಿಸಿದಿ. ಆದರೆ ಅವರಿಬ್ಬರೂ ರಾಜ ನಿರ್ವಹಣೆಗೆ ಅಸಮರ್ಥರು- ಇಷ್ಟಾಗಿಯೂ ಸುದೈವದಿಂದ ಅವರು ಸಮರ್ಥರಾಗಿದ್ದರೆ ನನ್ನ ಭಾಗ್ಯಕ್ಕೆ ಸೀಮೆ ಇಲ್ಲ. ಆದರೆ ವಿಧಿಯ ವಕ್ರಗತಿಯಿಂದ ಅವರು ವಿಕಲರೆನ್ನಿಸಿದರೆ ಇನ್ನೊಂದು ಸಂತಾನ ನೀನು ಕರುಣಿಸಿ ವಂಶ ರಕ್ಷಿಸಬೇಕು.''

''ಅದು ಧರ್ಮದ ವಿರುದ್ಧ ಆಚರಣೆ!''

ಶಾಸ್ತ್ರ ಏಕಪುತ್ರ ನಿಯೋಗವನ್ನೇ ಪ್ರಶಸ್ತವೆನ್ನುತ್ತದೆ. ಈ ವಿಷಯದಲ್ಲಿ ನನ್ನಿಂದ ಶಾಸ್ತ್ರಾಪರಾಧ ಮಾಡಿಸಬೇಡ''

''ಶಾಸ್ತ್ರಾತಿಕ್ರಮಣವು ನಿನಗೆ ಅಪರಾಧವಲ್ಲ. ಶಾಸ್ತ್ರ ನಿರ್ಮಾಣ ಬಲವಿರುವ ನೀನು ಅದನ್ನು ಯೋಚಿಸಬೇಡ. ನೀನು ಯಾರು ಎಂಬುದನ್ನೆಲ್ಲ ನನಗೆ ನಾರದರು ಹೇಳಿದ್ದಾರೆ--''

ನಾರದರ ಹೆಸರು ಎತ್ತಿದೊಡನೆ ತಾಯಿಯ ಅಪೇಕ್ಷೆಯತ್ತ ನನ್ನ ಮನಸ್ಸು ಒಲಿಯಿತು.

''ಒಂದು ವರುಷ ಅಂಬಿಕೆ ವ್ರತ ಮಾಡಿ ಸಿದ್ಧಳಾಗಲಿ. ಬಳಿಕ ಅಗತ್ಯವೆನ್ನಿಸಿದರೆ-- ನಾನು ಮರಳಿ ಬರುವೆ.''

''ನೀನು ಬರುವುದಾಗಿ ನನ್ನನ್ನು ನೋಡಿ ಹೇಳಿ ಹೋಗು. ನಾನು ಅಂಬಿಕೆಯನ್ನು ನಿನ್ನ ಶಕ್ತಿ ಗ್ರಹಣಕ್ಕೆ ಅನುಕೂಲಳನ್ನಾಗಿ ಮಾಡುವೆ--''

''ಆಗಲಿ ನಿನ್ನ ಅಭಿಲಾಷೆ ಕೈಗೂಡಲಿ'' ಎಂದು ನಾನು ಹೊರಡಲಣಿಯಾದೆ.

ರಥ ಸಿದ್ಧವಾಗಿತ್ತು. ನಾನು ರಥವೇರಿ ಕುಳಿತೆ. ವಿಚಿತ್ರವೀರ್ಯ, ಭೀಷ್ಮ ಹಾಗೂ ಮಂತ್ರಿಗಳು ಜಲಾಶಯದವರೆಗೆ ಬಂದರು. ನಾನು ಅವರನ್ನು ಬೀಳ್ಕೊಂಡು ಶಮ್ಯಾಶ್ರಮದ ದಾರಿ ಹಿಡಿದೆ.

# ಮಾನಸಗಂಗೋತ್ರಿಯಿಂದ ಮಣ್ಣುನೆಲಕ್ಕೆ

ಮನಸ್ಸು ಸ್ತಿಮಿತದಲ್ಲಿರಲಿಲ್ಲ. ಶಮ್ಯಾಶ್ರಮಕ್ಕೆ ಹೊರಟ ನಾನು ಕೇದಾರದ ಕಡೆಗೆ ರಥವನ್ನು ತಿರುಗಿಸಿ ಹೇಳಿದೆ. ಸಾರಥಿ ಪಾಪ! ನನ್ನ ಮನಸ್ಸಿನ ಹೊಯ್ದಾಟವನ್ನೇನು ಬಲ್ಲ? ಕೇದಾರದ ದಾರಿಯಲ್ಲಿ ಸಾಗುವವರೆಗೆ ನನ್ನನ್ನು ಕರೆತಂದು ಮುಂದೆ ರಥ ನಡೆಯದು ಎಂದು ಹೇಳಿ ನನ್ನನ್ನು ಇಳಿಸಿದ.

ನನ್ನ ಮನಸ್ಸಿಗೆ ಸಾಕಷ್ಟು ನೆಮ್ಮದಿ ಬೇಕಿತ್ತು. ಹಸ್ತಿನಾವತಿ ಏಕೋ ನನ್ನನ್ನು ಬಹಳ ದಣಿಸಿತ್ತು. ನಾನು ಕಾಡುಸೇರಿ ಒಂದು ನದಿಯ ಬಳಿಯಲ್ಲಿ ಆಸನಸ್ಥನಾದೆ. ಚಂದ್ರನ ಮೇಲೆ ಮನಸ್ಸು ಸ್ಥಿರ ಮಾಡಿ ಮನಸ್ಸನ್ನು ಅಮೃತಮಯ ಮಾಡಲು ಸಂಕಲ್ಪಿಸಿದೆ.

ಕೆಲ ದಿನಗಳ ನಂತರ ನನ್ನ ಮನಸ್ಸು ಹಗುರಾಯಿತು. ಆದರೆ ಕರ್ತವ್ಯವನ್ನು ತಲೆಗಂಟಿಸಿಕೊಂಡ ಯಾವನೂ ಒಂದು ಅರ್ಥದಲ್ಲಿ ಸುಖಿಯಾಗಿಲ್ಲ. ಕರ್ತವ್ಯದ ಹಿಂದೆ ಘನವಾದ ಸತ್ವ-ತತ್ವಗಳಿವೆ ಎಂಬ ಗಾಳಿಯಲ್ಲೆ ಮನುಷ್ಯ ಅದರ ದುಷ್ಪರಿಣಾಮ ಸಹಿಸುತ್ತಾನೆ. ಇಲ್ಲವೆ ಅವನ್ನೆಲ್ಲ ತನ್ನ ಅನುಕೂಲ ವೇದನೆ ಎಂದು ತಾಳುತ್ತಾನೆ.

ನಾನು ಮಾನಸಿಕವಾಗಿ ತುಂಬ ಬಲಿಷ್ಠನಾಗಿದ್ದರೂ ಎಲ್ಲಿಂದಲೋ ದೂರದ ಕ್ಷೇತ್ರದಿಂದ ನಾನು ಮೇಲಿಂದ ಮೇಲೆ ಬಲ ಪಡೆದು ತರಬೇಕಿತ್ತು. ನಿಶಿ-ದಿನ ಪೂರ್ತಿ ಸಮಯ ನಾನು ಬಲಿಷ್ಠನಾಗಿಯೇ ಇದ್ದೇನೆ ಎಂದು ನನಗೆ ಅನ್ನಿಸುತ್ತಿರಲಿಲ್ಲ. ನನ್ನ ದುರ್ಬಲತೆಗೆ ನನ್ನ ಜೀವಿತವು ಹೊಣೆ. ನಾನು ಯತ್ನಗಳಲ್ಲಿಯೇ ಸಾಗಿದ್ದುದೇ ಆಗಿತ್ತು.

ನಾನು ಈ ದುರ್ಬಲತೆಯನ್ನು ನೀಗಬೇಕಿತ್ತು!

ಅಲ್ಲಿ- ಆಗ ನಾನು ಯತ್ನದಲ್ಲಿ ಸಿಕ್ಕಿಕೊಳುತ್ತಿದ್ದೆ!

ಒದ್ದಾಟವಾಗುತ್ತಿತ್ತು.

ಗುದ್ದಾಟವಾಗುತ್ತಿತ್ತು.

ಹೋರಾಟವಾಗುತ್ತಿತ್ತು.

ಮನಸ್ಸಿನ ಕುದಿ, ಕಾವು ಇರುತ್ತಿತ್ತು. ಅಂತೂ ಈ ಇಕ್ಕಟ್ಟಿನಲ್ಲಿಯೇ ಸಾಗಿದ್ದೆ. ಬಹಳ ದಿನಗಳಿಂದ ಶತದ್ರು ತೀರದ ಚಟುವಟಿಕೆಗಳನ್ನು ನಾನು ತಿಳಿಯಬೇಕಿತ್ತು. ಆ ಹೊಣೆಯೊಂದು ನನ್ನ ಬೆನ್ನ ಮೇಲೆ ತನ್ನ ಅಸ್ತಿತ್ವವನ್ನು ಹಜ್ಜೆ ಹೆಜ್ಜೆಗೆ ಹೇಳುತ್ತಿತ್ತು. ಶತದ್ರು ತೀರದ ಘಟನೆಗಳನ್ನು ಅರಿಯಲು ನಾನು ಅಲ್ಲಿಗೇ ಹೋಗಬೇಕೆಂಬ ನಿಯಮವೂ ಇರಲಿಲ್ಲ. ಇಲ್ಲಿಂದಲೇ ಅಲ್ಲಿಯ ವಿದ್ಯಮಾನಗಳನ್ನೆಲ್ಲ ನಾನು ಸಹಜವಾಗಿ ಅರಿಯಬಹುದಿತ್ತು. ನನ್ನ ತಪಸ್ಸು ನನಗಾಗಿ ಇಷ್ಟು ಊಳಿಗ ಮಾಡುತ್ತಿತ್ತು. ಆದರೆ ನನ್ನ ಸಂಬಂಧಪಟ್ಟ ವ್ಯಕ್ತಿಗಳಲ್ಲೆಲ್ಲ ನನ್ನ ಹೆಗಲೆಣೆಯಾಗಿ ನಿಂತು ಕೆಲಸ ಮಾಡುವ ಶಕ್ತಿಯನ್ನು ನಾನು ಹೇಗೆ ಅಪೇಕ್ಷಿಸುವುದು? ಅವರೆಲ್ಲರಿಗೂ ಅಷ್ಟು ಶಕ್ತಿಪಾತಮಾಡಲು ಅದು ನನ್ನಲ್ಲಿಯೂ ಅಪರಿಮಿತವಾಗಿತ್ತೆಂದು ನಾನು ಭಾವಿಸಿರಲಿಲ್ಲ. ಅಂತೆಯೇ ನಾನು ಒಂದೇ ಕಡೆಗೆ ನಿಂತು ಎಲ್ಲ ಘಟನೆಗಳನ್ನೂ ನಿಯಂತ್ರಿಸಲಾರದವನಾಗಿದ್ದೆ.

ನನ್ನ ಯತ್ನದಲ್ಲಿ ತಪಸ್ಸು, ಯೋಗಗಳ ಸಹಾಯ ಅಮಿತವಾಗಿತ್ತು. ನನ್ನ ಸಹಕಾರಿಗಳಿಗೆ ಬಲ ಸಾಲದಾಗ ನಾನು ಅವರಿಗೆ- ಯೋಗದಿಂದ, ತಪಸ್ಸಿನಿಂದ ಬಲ ಗಳಿಸಿಕೊಳ್ಳಲು ಕೇಳಿದ್ದೆ. ಪರ್ಣಾಶ ನಮ್ಮ ಮಂಡಲದಲ್ಲಿ ಕೆಲಸ ಮಾಡುತ್ತಿದ್ದಾಗ ತುಂಬ ವ್ಯಗ್ರನಾಗಿ ಸೋತು ಹೋಗಿದ್ದ. ಅವನಿಗೆ ತಪೋಬಲ ಸಾಲದಾದಾಗ ನಾನೇ ಅವನಿಗೆ ಶಕ್ತಿ ಪ್ರದಾನ ಮಾಡಿದ್ದೆ.

ಹಲವು ತಿಂಗಳು ಕಳೆದ ಬಳಿಕ ನಾನು ಶತದ್ರು ತೀರಕ್ಕೆ ಬಂದೆ. ಸಾವಿರ ಕೆಲಸಗಳು ನನಗಾಗಿ ಕೈಕಟ್ಟಿಕೊಂಡು ಕಾದಿದ್ದವು. ವ್ಯಾಸನೆಂದು ದೇಶ ದೇಶದಲ್ಲಿ ನನ್ನ ಹೆಸರು ಖ್ಯಾತವಾಗಿತ್ತು. ರಾಜರಿಗೆ, ಚಕ್ರವರ್ತಿಗಳಿಗೆ ವಿಶ್ವಾವಸು ನನ್ನ ಬಗ್ಗೆ ತಿಳುವಳಿಕೆ ಕೊಟ್ಟಿದ್ದ.

ದೇವಲೋಕದ ಪ್ರಯಾಣಕ್ಕಾಗಿ ಹಲವು ರಾಜರು ಶತದ್ರು ತೀರದ ಆಶ್ರಮಕ್ಕಾಗಿ ಎಡತಾಕುತ್ತಿದ್ದರು. ವಿಶ್ವಾವಸು ಬಲು ಕಟ್ಟುನಿಟ್ಟಿನ ಮನುಷ್ಯ. ತತ್ವದಿಂದ ಸರಿದುದೇ ಅವನಿಗೆ ಗೊತ್ತಿಲ್ಲ. ಬಹಳ ಕಠೋರ. ರಾಜರಿಗೆ, ಚಕ್ರವರ್ತಿಗಳಿಗೆ ಸ್ವರ್ಗದಲ್ಲಿ ನಿಲ್ಲುವ ಯೋಗ್ಯತೆ ಇದೆ ಎನ್ನಿಸಿದರೆ ಮಾತ್ರ ಆತ ಅವರನ್ನು ನನ್ನ ಕಡೆಗೆ ಕಳಿಸುತ್ತಿದ್ದ.

ಸ್ವರ್ಗದ ಭೋಗಗಳನ್ನು ಕಾಮಿಸಿ ಹೋಗಲೆಳಸಿದವರನ್ನು ಆತ ಸನಿಹಕ್ಕೆ ಕರೆಯಲಿಲ್ಲ. ಆದರೆ ಇತ್ತೀಚೆಗೆ ಹೊಸ ನಾರದರು ಬಂದಿದ್ದರು. ವಿಶ್ವಾವಸುವಿನ ಕಠೋರ ನಿಯಮಗಳು ಸಡಿಲಾಗಹತ್ತಿದವು. ಏಕೆಂದರೆ ಈ ನವ ನಾರದರು ತುಂಬ ಮೃದು ಹೃದಯದವರು. ಅವರಿಗೆ ಯೋಗ್ಯತೆಯ ಪರೀಕ್ಷೆಗಿಂತ ಅನುಕಂಪವೇ ಜಾಸ್ತಿ. ಕಂಡವರ ಮೇಲೆ ಅವರಿಗೆ ಕರುಣೆ ಬಂತು. ನಮ್ಮ ಆಶ್ರಮಕ್ಕೆ ತಿಳಿಯದಂತೆ ಹಲವರನ್ನು ಸ್ವರ್ಗಕ್ಕೆ ಕಳಿಸಿದರು.

ಆದರೆ ಆದುದೇನು? ಅರ್ಹತೆ ಇಲ್ಲದ್ದಕ್ಕಾಗಿ, ಸ್ವರ್ಗದ ಆಚಾರಕ್ಕೆ ಅವರು ಹೊಂದಿಕೊಳ್ಳದೆ ಬೇಗನೆ ಭೂಮಿಗೆ ತಳ್ಳಲ್ಪಟ್ಟರು. ನಾರದರಿಗೂ ಅನ್ನಿಸಿತು. ಅನರ್ಹ ವಸ್ತುವಿಗೆ ಪುರಸ್ಕಾರ ಅಯುಕ್ತವೆಂದು. ಆದರೆ ಕಾರ್ಯಸಾಧಕರು, ನಾರದರ ಹತ್ತಿರ ಅತ್ತು ಕರೆದು, ಧನಬಲದಿಂದ ಕೇವಲ ಸ್ವರ್ಗಕಾಮನೆಗಾಗಿ ಒಂದೆರೆಡು ಯಜ್ಞ ಮಾಡಿ ಸ್ವರ್ಗಕ್ಕೆ ಓಡಲು ಹವಣಿಸುತ್ತಿದ್ದರು.

ಸ್ವರ್ಗದ ಘಟನಾ ವಿಶಾರದರು- ನಾರದರ ಮೂಲಕ ಭೂಮಿಗೆ ಇತ್ತ ಯಜ್ಞ ಸೌಕರ್ಯವನ್ನು ಕಸಿದುಕೊಳ್ಳಬೇಕು ಎಂದು ಸ್ವರ್ಗಾಧಿಪತಿಗೆ ಸಲಹೆ ಮಾಡಿದರು. ಆದರೆ ಇಂದ್ರ ''ಈಗ ಭೂಮಿಯಿಂದ ಸ್ವರ್ಗಕ್ಕೆ ಬರುವ ಹವಿಸ್ಸು ನಿಂತು ಹೋಗುವುದು, ಯಾವ ಮಾರ್ಗದಿಂದಾಗಲಿ ಹವಿಸ್ಸು ದೇವತೆಗಳಿಗೆ ತಲುಪುವುದಾದರೆ ಆ ಸೌಕರ್ಯವನ್ನು ಕಸಿಯಲು ಅಡ್ಡಿ ಇಲ್ಲ''ವೆಂದು ಸೂಚಿಸಿದಾಗ ಅದೂ ಯುಕ್ತ ಕ್ರಮವೇ ಎಂದು ಒಪ್ಪಿಕೊಂಡರು.

ನನಗೆ ಸ್ಮೃತಿ ಒಪ್ಪಿಸಿದ ವರದಿಯನ್ನು ನೋಡಿ ತುಂಬ ವಿವಂಚನೆಯಾಯಿತು.

ಸ್ವರ್ಗದಿಂದ ಅನರ್ಹತೆಯೊಂದಿಗೆ ಭೂಮಿಗೆ ಮರಳಿದವರಲ್ಲಿ ಕ್ಷತ್ರಿಯರೇ ಹೆಚ್ಚಿಗಿದ್ದರು. ಅನೇಕ ಜನ ಕ್ಷತ್ರಿಯರು ಅರಸೊತ್ತಿಗೆಯನ್ನು ಬಿಸುಟು ರಾಜಕೀಯದಿಂದ ಪೂರ್ಣ ಅಲಿಪ್ತರಾಗಿ ಕ್ಷತ್ರಿಯತ್ವವನ್ನು ತಪಸ್ಸಿಗೆ ಪರಿವರ್ತಿಸಿ ಋಷಿ ಮುನಿಗಳಾದ ಬಳಿಕ ಸ್ವರ್ಗಕ್ಕೆ ಹೋದ ನಾಲ್ಕಾರು ಸಂಗತಿಗಳನ್ನು ಸ್ಮೃತಿಯ ವರದಿ ತೋರಿಸುತ್ತಿತ್ತು.

ಈ ಘಟನೆಯಲ್ಲಿ ಆನುವಂಶಿಕ ಬ್ರಾಹ್ಮಣರಿಗಿಂತಲೂ ಇವರು ಸತ್ವಶಾಲಿಗಳಾಗಿ ಸ್ವರ್ಗವನ್ನು ಅನುಭೋಗಿಸಿದ್ದರು. ಒಂದು ಮಾತು ಮಾತ್ರ ಸ್ಪಷ್ಟವಿತ್ತು: ಅನರ್ಹರಾದ ಕ್ಷತ್ರಿಯರನ್ನು ನೇರವಾಗಿ ಸ್ವರ್ಗಕ್ಕೆ ಕಳಿಸುವುದಕ್ಕಿಂತ ಕೆಲವು ವರುಷಗಳಾದರೂ ಅವರು ಆರ್ಷ ಜೀವನವನ್ನು ಜೀವಿಸಿದ ಮೇಲೆ- ಹೋಗುವುದು ಯೋಗ್ಯವಿತ್ತು.

ಸ್ಮೃತಿಯು ಅನ್ವೇಷಣೆಯಲ್ಲಿ ತೋರಿಸಿದ ಇನ್ನೊಂದು ಮುಖ್ಯ ಅಂಶ, ಇದಾಗಿತ್ತು. ಕೆಲವರು ಭೂಮಿಯಿಂದ ಸ್ವರ್ಗಕ್ಕೆ ಹೋಗಿ, ದೇವತೆಗಳ ಸಂಪರ್ಕ ಬೆಳೆಸಿದರು. ಇನ್ನು ಕೆಲವರು ದೇವತೆಗಳನ್ನು ಭೂಮಿಗೆ ಕರೆದು ತಮ್ಮ ಸಂಪರ್ಕದಲ್ಲಿರಿಸಿದರು. ಇವರಲ್ಲಿ ಕೊನೆಯ ವರ್ಗ ಪ್ರಯತ್ನದಲ್ಲಿ ಪ್ರಚಂಡರೂ ಭೂಮಿಗೆ ಬೇಕಾಗುವ ಸಹಾಯವನ್ನು ದೇವತೆಗಳಿಂದ ಒದಗಿಸಲೂ ಹೆಚ್ಚು ಶ್ರಮಿಸಿತು. ಆದರೆ ಇವೆರಡೂ ವರ್ಗದಲ್ಲಿ ಸ್ಥಾಯಿಯಾದ ಒಂದು ಶಕ್ತಿ ಇಲ್ಲವೆಂಬುದನ್ನು ಸ್ಮೃತಿ ತಿಳಿಸಿದ್ದಳು. ಸ್ಮೃತಿಯ ಹಲವಾರು ಘಟನೆಗಳನ್ನು ನಾನು ಐತಿಹಾಸಿಕ ವಿವರಣೆಕಾರರ ಕಾರ್ಯಾಲಯಕ್ಕೆ ಕಳಿಸಿದೆ.

ಸ್ಮೃತಿ ಇನ್ನೊಂದು ಮಾತನ್ನು ತನ್ನ ಸಂಶೋಧನೆಯಲ್ಲಿ ಕಂಡುಹಿಡಿದಿದ್ದಳು. ಅದೆಂದರೆ ನೆಲದಿಂದ ಮೇಲೆ ಹೋದ ಅನೇಕ ರಾಜರು ಅಸುರರ ಬೇಹುಗಾರಿಕೆಯ ಆರೋಪದಿಂದ ಶಂಕಾಸ್ಪದರಾಗಿದ್ದಾರೆ. ಈ ಮಾತು ನನ್ನನ್ನು ಬಹಳ ಅಧೀರನನ್ನಾಗಿ ಮಾಡಿತು.

ನಾನು ನಾರದರನ್ನು ಕೇಳಿದೆ. ಅವರಿಗೆ ಈ ಮಾತಿನಲ್ಲಿ ತಥ್ಯ ಕಾಣಿಸಲಿಲ್ಲ. ಅಲ್ಲದೆ, ಅವರು ಅಸುರರೂ ಸಹಾನುಭೂತಿ- ಅನುಕಂಪಗಳನ್ನು ಅಳವಡಿಸಿಕೊಂಡಿದ್ದರೆ ಸ್ವರ್ಗಕ್ಕೆ ಯೋಗ್ಯರು ಎಂಬುದು ತಮ್ಮ ವಾದವೆಂದು ಹೇಳಿದರು. ಮತ್ತು ಕೇವಲ ಈ ಯೋಗ್ಯತೆಯಿಂದ ಅನೇಕ ಅಸುರ ಪ್ರಸಿದ್ಧರು ದೇವತೆಗಳನ್ನೇ ತಾವಿದ್ದಲ್ಲಿಗೆ ಕರೆಯಿಸಿಕೊಂಡು ಋಷಿಗಳು ಬೀರಿದ ಪ್ರಭಾವವನ್ನೇ ದೇವತೆಗಳ ಮೇಲೆ ಬೀರಿದ್ದನ್ನು ನಾರದರು ಹೇಳಿದರು.

ಒಂದಾದ ಮೇಲೆ ಒಂದರಂತೆ ನಾವು ಸಮಸ್ಯೆಗಳನ್ನು ಎದುರಿಸಬೇಕಾಗಿ ಬಂತು. ಕ್ಷತ್ರಿಯರಿಗೇ ಆಗಲಿ, ಋಷಿಗಳಿಗೇ ಆಗಲಿ ದೇವತಾ ಸಂಪರ್ಕ ಶಾಶ್ವತವಾಗಿರಬೇಕು. ಈ ಬಗ್ಗೆ ನನ್ನ ಬ್ರಹ್ಮಸೂತ್ರ ಪ್ರಣಾಲಿ ಸಾಕಷ್ಟು ಕೆಲಸ ಮಾಡುವುದಾಗಿ ನನಗೆ ವಿಶ್ವಾಸವಿತ್ತು.

ನನಗೆ ಇಷ್ಟು ಪ್ರಚಂಡ ಕಾರ್ಯದಲ್ಲಿ ಮೇಲಿಂದ ಮೇಲೆ ಶಕ್ತಿ ಸಾಲದು ಎನ್ನಿಸುತ್ತಿತ್ತು. ಸಮಾಜಗಳನ್ನು ನಡೆಸಿಕೊಂಡು ಹೋಗುವ ಋಷಿಗಳಿಗೆ ನಾವು ಶಕ್ತಿದಾನ ಮಾಡಬೇಕಿತ್ತು. ಈ ಪ್ರಚಂಡ ಆಂದೋಲನದಲ್ಲಿ ಒಮ್ಮೊಮ್ಮೆ ನಾವು ತತ್ತರಿಸಿ ಹೋಗುತ್ತಿದ್ದೆವು. ಲೋಕ ನಡೆಯುವುದಕ್ಕಿಂತ ನಾವು ಎಡಹುವುದೇ ಜಾಸ್ತಿ. ಅದು ಅದಕ್ಕೆ ಸಹಜ. ಅದರ ಆಶೆ ಜೀವದ ಯೋಗ್ಯತೆಗಿಂತ ದೊಡ್ಡದಾಗಿರುತ್ತಿತ್ತು. ತನ್ನ ಆಶೆಗಳನ್ನು ಪೂರೈಸಿಕೊಳ್ಳುವಂತೆ ಅದರ ಬೆಳವಣಿಗೆ ಪರಿಪೃಥವಾಗಿರಬೇಕಿತ್ತು.

ಇದಕ್ಕೆಲ್ಲ ದೇಶವನ್ನು ಆಳುವ ಸಂಸ್ಥೆ ದೈವೀ ಸಂಪರ್ಕವನ್ನು ಶಾಶ್ವತವಾಗಿ ಹೊಂದಲು ಯೋಗ್ಯವಾಗಿರುವಂತೆ ಸಿದ್ಧವಾಗಬೇಕಿತ್ತು.

ನಾನು ಹಸ್ತಿನಾವತಿಯಲ್ಲಿ ಇದನ್ನು ಸ್ಮರಣೆಯಲ್ಲಿಟ್ಟುಕೊಂಡೇ ನಿಯೋಗವಿಧಿಗೆ ಒಪ್ಪಿದ್ದೆ. ಆದರೆ ಆಗ ನಾನೂ ಮಾನಸಿಕ ದ್ವಂದ್ವದಲ್ಲಿದ್ದೆ. ಅಲ್ಲದೆ- ಆ ಪಾತ್ರ ಭೂಮಿಯ ಯೋಗ್ಯತೆಯೂ ನಿಕೃಷ್ಟವಾದುದಿತ್ತು. ನನ್ನ ಸಂಕಲ್ಪ ಸಿದ್ಧಿಗಾಗಿ ಶುದ್ಧ ಪಾತ್ರದ ಅಗತ್ಯವೂ ಇತ್ತು. ಆದರೆ ಸಾಧ್ಯವಾಗಿರಲಿಲ್ಲ.

ಹಸ್ತಿನಾವತಿ ಎಂದ ಕೂಡಲೆ ಮತ್ತೆ ನನ್ನ ನಿಲುವು ಮಾನಸಗಂಗೋತ್ರಿಯಿಂದ ಮಣ್ಣು ನೆಲಕ್ಕೆ ಬಂತು. ನಾನು ಹಸ್ತಿನಾವತಿಯಲ್ಲಿ ಒಂದು ವರುಷಕ್ಕೆ ಸರಿಯಾಗಿ ಬರುವೆನೆಂದು ಹೇಳಿದ್ದು ನನ್ನ ಮನಸ್ಸಿನೆದುರು ಬಂತು.

ವರುಷಕ್ಕೆ ಕೆಲವೇ ದಿನ ಹತ್ತಿರವಿತ್ತು. ಶತದ್ರು ತೀರದ ಆಶ್ರಮದ ಕೆಲಸವೇ ಹಲವು ಹತ್ತು ವರುಷಗಳನ್ನು ದುಡಿದರೂ ತೀರದಷ್ಟಿತ್ತು.

ಹಿಂದಿನ ನಾರದರು ನನ್ನ ಬಗ್ಗೆ ಬಹು ದೊಡ್ಡ ಆಸೆ ಇಟ್ಟುಕೊಂಡು, 'ಅದಕ್ಕೆ ಹಾದಿ ಇದಲ್ಲ' ಎಂದರು. ಈ ನಾರದರೋ ನನ್ನನ್ನು ತುಂಬ ಈ ಕಾರ್ಯಕ್ಕೆ ಪ್ರೋತ್ಸಾಹಿಸುತ್ತಾರೆ. ಅವರೇ ನನ್ನನ್ನು ನಡೆಸುತ್ತ ಬಂದರು. ಶಕ್ತಿ ಕೊಟ್ಟರು. ಒಂದು ದಿನ ಸ್ಪಷ್ಟವಾಗಿ ಹೇಳಿದರು 'ಇದು ನಿನ್ನ ಹಾದಿಯಲ್ಲ' ಎಂದು.

ಯಾವಾಗ? ನಾನು ನನ್ನ ಮಹತ್ವದ ಕೃತಿ ಎಂದು ನಂಬಿದ ಬ್ರಹ್ಮಸೂತ್ರವನ್ನು ಅವರು ಅವಲೋಕಿಸಿದಾಗ

"ಬಾದರಾಯಣ ! ಕೃತಿ ನಿನ್ನನ್ನು ಮನೀಷಿಯನ್ನಾಗಿ ಮಾಡಬಲ್ಲದು. ಸುಕೃತಿ - ನಿನ್ನನ್ನು ದೈವೀ ಸಂಪರ್ಕದಲ್ಲಿಡಬಲ್ಲದು - ಆದರೆ ನೀನು ಕೃತಿಯ ಸೀಮೆಯನ್ನೇ ದಾಟ ಬೇಕು. ಲೀಲಾವಿಭೂತಿಯಾಗಬೇಕು..."

ಅಂದಿನ ನಾರದರ ಮಾತು ಆಕರ್ಷಕವೆನ್ನಿಸಿತು. ಆದರೆ ನಾನು ಪ್ರವರ್ತಿಸಲಿಲ್ಲ. ನನ್ನನ್ನು ಯಾರೋ ಬಲವತ್ತರವಾಗಿ ಕೃತಿಯ ಕಡೆಗೇ, ಪ್ರಯತ್ನದೆಡೆಗೇ ಎಳೆಯುತ್ತಿದ್ದರು. ನಾನು ಆ ಎಳೆತ ತಪ್ಪಿಸಿಕೊಳಲಿಲ್ಲ.

ಈಗ ನಾನು ಹಿಡಿದ ಹಾದಿ ತಪ್ಪೆ?

ಇಂದು ಜಗತ್ತಿಗೆ ನನ್ನ ಅಗತ್ಯವಿದೆ ಎಂದು ನನ್ನನ್ನು ಅನುಸರಿಸುತ್ತಿದೆ. ನನಗೂ ಅದರ ಅಗತ್ಯವಿದೆ. ಅಂತಯೇ ನಾನು ಅದನ್ನು ನಂಬಿಕೊಂಡಿದ್ದೇನೆ.

ಒಮ್ಮೆ ಹಿಂದಿನ ನಾರದರು ನನಗೆ ಹಿಮಗಿರಿಯಲ್ಲಿ ಹೇಳಿದ್ದರು:

''ಬಾದರಾಯಣ, ನಿನ್ನ ಯೋಗ್ಯತೆಘನವಾದುದು; ನೆಲದ ಮೇಲೆ ನೀನು ಸಾಧಿಸಿದ್ದನ್ನು ಯಾರೂ ಸಾಧಿಸಿರಲಾರರು. ನಿನ್ನ ಸತ್ವವನ್ನು ನೆಲದವರ ದೃಷ್ಟಿಯಿಂದ ಅಳೆದುಕೊಂಡು ತೃಪ್ತನಾಗಬೇಡ. ದೇವತೆಗಳ ಜತೆಗೆ ನಿನ್ನನ್ನು ತೂಗಿಕೋ!

''ಪರಾಶರರು ನಿನ್ನನ್ನು ಮಗನಾಗಿ ಪಡೆಯುವಾಗ ಏನೆಂದು ಸಂಕಲ್ಪಿಸಿದ್ದರು ಗೊತ್ತೆ? ಬಾದರಾಯಣ, ವಿಶ್ವದ ಇತಿಹಾಸ ಬರೆಯುವ ನೀನು ನಿನ್ನ ಇತಿಹಾಸ ತಿಳಿದು ನಡೆ.

''ನಿನ್ನ ತಂದೆ, ವಿಶ್ವನಿಯಾಮಕ ಶಕ್ತಿ ತನ್ನಲ್ಲಿ ಮಗನಾಗಿ ಮೈದಾಳಲಿ ಎಂದು ಬಯಸಿದರು.

'' ನಿನ್ನ ತಾಯಿ ಅವಳು ಶಾಪಗ್ರಸ್ತಳಾದರೂ ಮಹಾ ತಪಸ್ಸಿನಿಂದ ಪರಮಾತ್ಮ ಸತ್ವ ತನ್ನ ಬಸಿರಿನಿಂದಮಗನಾಗಿ ಹುಟ್ಟಿಬರಲಿ ಎಂದು ಹರಕೆ ಹೊತ್ತಿದ್ದಳು. ನೀನೋ, ಇತಿಹಾಸಕಾರನಾದರೆ ಸಾಕು ಎಂದು ಸಮಾಧಾನ ಪಟ್ಟು ಕೊಳ್ಳುತ್ತೀ--

''ನೂರು ಜನ ಋಷಿಗಳು ಮಾಡದ್ದನ್ನು ನೀನು ಮಾಡಿದರೆ ಮಹಾ ಕಾರ್ಯವಲ್ಲ. ಹಲವು ದೇವತೆಗಳು ಜರುಗಿಸಲಾರದ್ದನ್ನು ನೀನು ಜರುಗಿಸುವುದು ಅಗತ್ಯ''

ಇವು ಆ ನಾರದರ ಮಾತು! ನನ್ನ ಹೃದಯವನ್ನು ತೂಗಾಡಿಸಿದವು. ಹಾಗಾದರೆ ಇವರನ್ನೆಲ್ಲ ಕ್ಷಣಾರ್ಧದಲ್ಲಿ ಚೆಲ್ಲಿಕೊಟ್ಟು ಹಿಮಗಿರಿಗೆ ಹೋಗಿ ನಾನು ಮಾಡಬೇಕೆಂದುದನ್ನು ಮಾಡಲೆ?

ಈಗ ಮಾಡುತ್ತಿರುವುದು ನಾನು ಮಾಡಬೇಕೆಂದುದೇ ಅಲ್ಲವೆ? ಖಂಡಿತವಾಗಿ ಇದು ನಾನು ಮಾಡಬೇಕಾಗಿದ್ದೆ - ನಾನೇ, ಇದನ್ನು ಸಂಕಲ್ಪಿಸಿದ್ದೆ ಅಲ್ಲವೆ? ಇಂದಿನ ನಾರದರೂ ನನ್ನ ಈ ಕಾರ್ಯವನ್ನು ಅನುಮೋದಿಸಿ ನನ್ನನ್ನು ಈ ದಿಶೆಯಲ್ಲಿ ಮುಂದುವರಿಯುವಂತೆ ಪ್ರೇರಿಸುವರು.

ನಾನು ಇಂದಿನ ಈ ವಿಸ್ತಾರವಾಗಿ ಹಮ್ಮಿದ ಕಾರ್ಯ ಕ್ಷೇತ್ರವನ್ನು ಉಪಸಂಹರಿವುದು ಯುಕ್ತವೆ? ಹಾಗಿದ್ದರೆ ವಿಶ್ವಕ್ಕೆ ಅಗತ್ಯವಾದ- ಕ್ಷೇಮಕರವಾದ ಈ ಕಾರ್ಯವನ್ನು ಮಾಡುವವರಾರು?

ಇದನ್ನು ನಾನು ಮಾಡುವವನೆನ್ನುವುದು ಸರಿಯೆ?

ಇನ್ನಾರಿಗೂ ಮಾಡುವ ಬಲವಿಲ್ಲದಾಗ ನಾನು ಹಾಗೆ ಹೇಳಿದ್ದು ತಪ್ಪೇ?

ನನಗೆ ನಾನು ಹಿಡಿದ ಹಾದಿಯಲ್ಲಿ, ನಾನು ಮಾಡುವ ಕೃತಿಯಲ್ಲಿ ಯಾವ ತಿದ್ದುಪಡಿಯೂ ಈಗ ಅಗತ್ಯವಿಲ್ಲ. ಇದು ಸರಿ!

ಈಗ ನಾರದರಾಗಿದ್ದವರು ಆಗಾಗ ಹೇಳುತ್ತಿದ್ದಾರೆ.

''ಮಾನವ ಕುಲದಲ್ಲಿಯ ದ್ವೇಷ ಮರೆಯಾಗಬೇಕು.''

''ಐಕ್ಯ ಮೂಡಿಬರಬೇಕು.''

''ಅದಕ್ಕಾಗಿ ಭಕ್ತಿಗಾಗಿ ಜನರ ಹೃದಯವನ್ನು ಸಿದ್ಧಗೊಳಿಸಬೇಕು.''

ವಿಶ್ವವನ್ನು ಮುಂದಿಟ್ಟುಕೊಂಡು ಅದರ ಕ್ಷೇಮಾಭಿವೃದ್ಧಿಗೆ ಶ್ರಮಿಸಲಿದ್ದ ನಾನು ಇದನ್ನು ಅನುಮತಿಸಿದ್ದೆ. ಅನುಮತಿಸುವುದು ಅಗತ್ಯವೂ ಇತ್ತು. ನಾರದರಂತಹ ಲೋಕಾಂತರ ಅನುಭವವುಳ್ಳ ವ್ಯಕ್ತಿ ನನ್ನ ಕಾರ್ಯದಲ್ಲಿ ಅಪಾರ ಸಹಾಯವನ್ನೆ ಮಾಡುತ್ತಿದ್ದರು.

ಹಿಂದಿನ ನಾರದರು........!

ಮತ್ತೆ ನನ್ನ ಕಣ್ಣಿಗೆ ಅದೇ ದೃಶ್ಯ. ಈ ಹೊಯ್ದಾಟದಲ್ಲಿ ಒಂದು ದಿನ ಹಸ್ತಿನಾವತಿಗೆ ಕೊಟ್ಟ ಆಶ್ವಾಸನೆಗೆ ಇನ್ನೊಂದು ಪಕ್ಷ ಮಾತ್ರ ಉಳಿದಿದೆ ಎಂದು ತಿಳಿಯಿತು.

# ದಾಸಿಯ ಸೌಭಾಗ್ಯ

ಒಂದು ವರುಷದ ನಂತರ ನಾನು ಹಸ್ತಿನಾವತಿಯನ್ನು ಪ್ರವೇಶಿಸಿದ್ದರೂ ನಗರದಲ್ಲಿ ಅದ್ಭುತ ಬದಲಾವಣೆಯಾಗಿತ್ತು. ಅಲ್ಲದೆ ನಾಗರಿಕರು ನನ್ನನ್ನು ನೋಡುವ ದೃಷ್ಟಿಯೂ ಬೇರೆಯಾಗಿತ್ತು. ನಾನು ರಥವನ್ನಿಳಿಯುತ್ತಲೆ ಭೀಷ್ಮ ವಿಚಿತ್ರವೀರ್ಯ ಹಾಗೂ ಮಂತ್ರಿಮಂಡಲದ ಸದಸ್ಯರು ಅದ್ಭುತ ಸ್ವಾಗತವಿತ್ತರು. ಈ ಸಲದ ವಿಶೇಷವೆಂದರೆ ನಾನು ಹಸ್ತಿನಾವತಿಗೆ ಬರುವ ಸಮಾಚಾರವನ್ನು ವಿಂಧ್ಯಾಚಲದ ಹಾಗು ಶೋಣ ತೀರದ, ಋಷಿ ಸಮೂಹವೆಲ್ಲ ಅರಿತು ನನ್ನ ಸಂದರ್ಶನಕ್ಕಾಗಿ ಬಂದುದು.

ನಾನು ಕಳೆದ ಸಲದಂತೆಯೆ ರಾಜಭವನದ ಯಜ್ಞ ಶಾಲೆಯಲ್ಲಿ ತಂಗಿದ್ದೆ. ಒಂದು ನೂರಕ್ಕೂ ಹೆಚ್ಚಾದ ಋಷಿ ಮುನಿಗಳು ನನ್ನ ಬರವಿಗಾಗಿ ಕಾದಿದ್ದರು.

ನನ್ನ ತಾಯಿ ಪುತ್ರವಧುಗಳ ಜತೆಗೆ ಕಾಣಲು ಬಂದಳು. ತಾಯಿ ಸಾಕಷ್ಟು ಗೆಲುವಿನಲ್ಲಿದ್ದರು. ಅವಳ ಹಿರಿಯ ಸೊಸೆ ಅಂಬಿಕೆ ಹೆತ್ತ ಮಗುವಿಗೆ ಧೃತರಾಷ್ಟ್ರನೆಂದು ಹೆಸರಿಟ್ಟಿದ್ದರು. ಅಂಬಾಲಿಕೆಯ ಮಗನ ಹೆಸರು ಪಾಂಡು.

ನಾನು ಆ ಮುದ್ದಿನ ಮಕ್ಕಳನ್ನು ಕೈಗೆತ್ತಿಕೊಂಡೆ. ನನ್ನ ತಾಯಿಯ ಅಭಿಲಾಷೆಯ ಫಲ ಮಾತ್ರ ಅವಾಗಿರದೆ ನನ್ನ ಸಂಕಲ್ಪದ ವಾಹಕಗಳೂ ಅವಾಗಿದ್ದವು.

ಯಜ್ಞಾದಿಗಳಿಂದ ಕ್ಷತ್ರಿಯರು ಸ್ವರ್ಗಕ್ಕೆ ಹೋಗುತ್ತಾರೆ. ಆದರೆ ದೇವತೆಗಳೊಡನೆ ಕೊನೆಯಿರದೆ ಜೀವಿಸುವ ಯೋಗ್ಯತೆ ಇಲ್ಲದೆ ಮರಳಿ ಮಣ್ಣಿಗೆ ಬರುತ್ತಾರೆ.

ಋಷಿಗಳು ತಪೋಬಲದಿಂದ ದೇವತೆಗಳನ್ನು ಭೂಮಿಗೆ ತರುತ್ತಾರೆ. ಭೂಮಿಗಿಳಿದ ದೇವತೆಗಳು ಮನುಷ್ಯರ ಜತೆಗೆ ಅದೆಷ್ಟು ದಿನ ಇರುತ್ತಾರೆ?

ದೇವ ಮಾನವರಲ್ಲಿ ಸಹಜೀವನ ಶಾಶ್ವತವಾಗಬೇಕು. ಇದು ನನ್ನ ಎಣಿಕೆ, ಪ್ರಯತ್ನ.

ವಿಚಿತ್ರವೀರ್ಯನ ಕ್ಷೇತ್ರದಲ್ಲಿ ಸಂತಾನದ ಸಂಕಲ್ಪ ನಾನು ತೊಡುವಾಗ ನನ್ನ ಲಕ್ಷ್ಯದಲ್ಲಿ ಈ ವಿಚಾರವಿತ್ತು. ಆದರೆ ಸಂಕಲ್ಪ ಏಕ ಮುಖವಾಗಿತ್ತು. ನನಗಿರುವ ಪ್ರಜ್ಞೆ ವಿಚಿತ್ರವೀರ್ಯನ ಪತ್ನಿಯರಿಗಿದ್ದಿಲ್ಲ. ಅಲ್ಲದೆ ಅವರಿಗೆ ನನ್ನ ರೂಪ, ಯೌವನಗಳ ವಿಷಯದಲ್ಲಿಯೆ ಒಂದು ಬಗೆಯ ಅಸಡ್ಡೆ ಇತ್ತು. ಅಂತೆಯೆ ಸಂತಾನ ಅಕ್ಷಮ್ಯವಾಗುವುದಾಗಿ ನಾನು ತಾಯಿಗೆ ತಿಳಿಸಿದ್ದೆ.

ತಾಯಿ ತನ್ನ ಯೋಗ್ಯತೆಯ ಮೇರೆಗೆ ತನ್ನ ಮಗನಿಗೆ ಮಕ್ಕಳಾದರೆ ಸಾಕು ಎಂಬ ಮನೋಭಾವದಲ್ಲಿದ್ದಳು. ಈಗ ಅವಳ ಇಚ್ಛೆಯ ಬಹುಭಾಗ ಸಿದ್ಧಿಸಿತ್ತು. ಅಂತೆಯೇ ಅವಳ ಮುಖದಲ್ಲಿ ಈಗ ಒಂದು ವರುಷದ ಹಿಂದಿನ ವಿಷಣ್ಣತೆ ಇದ್ದಿಲ್ಲ.

''ಅಂಬಿಕೆ, ನಿನಗಾಗಿ ನೋಂತಿದ್ದಾಳೆ--''

ತಾಯಿಯ ಧ್ವನಿಯಲ್ಲಿ ಇನ್ನೂ ಆಶೆಯಿತ್ತು. ಅವಳು ಅಂಬಿಕೆಯಲ್ಲಿ ಒಳ್ಳೆಯ ಸಂತಾನದ ಕನಸು ಕಾಣುತ್ತಿದ್ದಳು!

''ನೋಡು, ಈತ ಧೃತರಾಷ್ಟ್ರ ಸರ್ವ ವಿಧದಿಂದ ಆಕರ್ಷಕ ಶಿಶು, ಆದರೆ ಕುರುಡ. ಅಂದು ನೀನು ಈ ಮಾತನ್ನು ಸ್ಪಷ್ಟವಾಗಿ ಹೇಳಿದ್ದಿ. ನಾನು ಅಂಬಿಕೆಗೆ ಎಷ್ಟು ಧೈರ್ಯ ಸಮಾಧಾನ ಹೇಳಿದ್ದರೂ ಅವಳು ಇಷ್ಟಕ್ಕೆಯೇ ಸಮರ್ಥಳಿದ್ದಳು........

''ಈತ ನೋಡು, ಪಾಂಡು! ಮಾಡುವುದೇನು?'' ತಾಯಿಗೆ ವಿಕಲ ಸಂತಾನ, ಒಮ್ಮೆ ವೇದನೆ ತಂದಿತು.

ತಾಯಿ ಹೊರಡಲು ಸಿದ್ಧಳಾದಳು. ಅಂಬಿಕೆ ನಮಸ್ಕರಿಸಿ ಮಗನನ್ನು ಕರೆದುಕೊಂಡು ಮುಂದೆ ನಡೆದಳು. ನಾನು ಅವಳನ್ನೊಮ್ಮೆ ಕಣ್ಣರಳಿಸಿ ನೋಡಿದೆ. ಅವಳ ಕಣ್ಣಿನಲ್ಲಿ ನನ್ನನ್ನು ಅಂಗೀಕರಿಸುವ ಸಿದ್ಧತೆ ಪೂರ್ತಿಗೊಂಡ ಚಿಹ್ನೆ ತೋರಲಿಲ್ಲ.

ಮತ್ತೆ ಒಂದು ರಾತ್ರಿ!

ರಾಜಸದನದ ಉತ್ತೇಜಕ ಶಯ್ಯಾಗಾರ,

ಹಿಮಾಲಯದ ಕಂದರಗಳಲ್ಲಿ, ವಿಶ್ವದ ತೊಡಕುಗಳನ್ನು ಬಿಡಿಸುವ ಯತ್ನದಲ್ಲಿರುವ ನಾನು ಒಂದು ಸಾಮಾನ್ಯ ರಾಜಮನೆತನದ ಸಮಸ್ಯೆಯನ್ನು ಬಿಡಿಸಬೇಕು. ನನಗೆ ಅದು ಭಾರದ್ದಲ್ಲ. ಆದರೆ ಅದನ್ನು ಬಿಡಿಸದಿರುವ ಮನಸ್ಥಿತಿ ನನಗೆ ಬರಲಾರದ್ದು, ಎಂತಹ ದುರದೃಷ್ಟ! ಬಿಡಿಸಬಾರದೆನ್ನುವ ಹಟವೂ ನನಗೆ ನಿಷಿದ್ಧ. ಆದರೂ ಈ ಕ್ರಮದಲ್ಲಿ ನಾನು ಕಾಲು ಜಾರಿದ್ದೆ.

ಇಲ್ಲ; ಒಂದು ಅರ್ಥದಲ್ಲಿ ನನ್ನ ದೂರಗಾಮಿ ಪ್ರಯತ್ನ ಇದರಲ್ಲಿ ಫಲ ಕಾಣಲಿತ್ತು. ಶಯನಾಗಾರದಲ್ಲಿಯ ಮಾದಕ ಸುಗಂಧ ಬಾಗಿಲಿನಿಂದ ಹೊರಗೆ ಧುಮುಕುತ್ತಿತ್ತು. ನಾನು ಒಳಗೆ ಕಾಲಿಡುತ್ತಲೇ ಮಂಚದಿಂದಿಳಿದು ಬಂದು ಅವಳು ಮಂದಹಾಸದಿಂದ ನನ್ನನ್ನು ಸ್ವಾಗತಿದಳು. ಮಂಚದ ಮೇಲೆ ನಾನು ವಿಶ್ರಮಿಸಿದೆ. ನನ್ನ ಪಾದಗಳಲ್ಲಿ ಹಣೆ ಇಟ್ಟು ದೀನಳಾಗಿ ನಮಸ್ಕರಿಸಿದಳು. ಅವಳೆಡೆಗೆ ನಾನು ನೋಡಿ ಆಶೀರ್ವದಿಸಿದೆ.

ಶಯನಾಗಾರದ ಕದಗಳನ್ನು ಹೊರಗಿನಿಂದ ದಾಸಿಯರು ಹಾಕಿಕೊಂಡು ಹೊರಟು ಹೋದರು, 'ಅಂಬಿಕೆ' ಫಲ ತಾಂಬೂಲಗಳ ಚಿನ್ನದ ತಟ್ಟೆಯನ್ನು ಮಂಚದ ಮೇಲಿಟ್ಟು,

''ದೇವರು ಅಂಗೀಕರಿಸಬೇಕು.''

ಅವಳ ಧ್ವನಿಯಲ್ಲಿ ಇಂದು ಅಮಿತ ಉತ್ಸಾಹ ವ್ಯಕ್ತವಾಗುತ್ತಿತ್ತು. ನಾನು ಮೊದಲ ಸಲದ ಅವಳ ನಡತೆಯನ್ನು ಜ್ಞಾಪಿಸಿಕೊಂಡೆ . ಸಂಕೋಚ ಮಾತ್ರವಲ್ಲ, ನನ್ನ ಬಗ್ಗೆ ಸಾಕಷ್ಟು ಜುಗುಪ್ಸೆ ಇತ್ತು. ಈ ಮುಕ್ತ ಹೃದಯ ಇರಲಿಲ್ಲ. ನೋಂತ ಜೀವನ ಪರಮಾತ್ಮನ ಸಾನ್ನಿಧ್ಯಕ್ಕೆ ಅರ್ಹವಾಗುತ್ತದೆ ಎಂಬ ನಾರದರ ಸಿದ್ಧಾಂತಕ್ಕೆ ಅವಳು ಪ್ರತ್ಯಕ್ಷ ನಿದರ್ಶನಳಾಗಿದ್ದಳು. ಅಂತೆಯೇ ನಾನು ತಾಯಿಗೆ ದುಂಬಾಲು ಬಿದ್ದು ಹೇಳಿದ್ದೆ.

''ತಾಳು, ಒಂದು ವರುಷದ ವರೆಗೆ'' ಎಂದು. ತಾಳಿದ್ದರೆ - ಆ ಮಾತೇ ಬೇರೆ ಯಾಗುತ್ತಿತ್ತು. ತನ್ನ ವಂಶಕ್ಕೆ ಆಧಾರಬೇಕು ಎಂಬ ತಾಯಿಯ ಆತುರತೆಯೇ ಹೆಚ್ಚು. ಇವಳೋ ಏನೂ ಅರಿಯದ ಮುಗ್ಧ ಸ್ತ್ರೀ. ನನ್ನ ತಾಯಿಗೆ ತಿಳಿದ ವಿಚಿತ್ರವೀರ್ಯನ ನಿರ್ವೀರ್ಯ ರಹಸ್ಯ ಇವಳಿಗೆ ತಿಳಿದಿಲ್ಲ. ತಿಳಿದಿದ್ದರೆ.... ಇದಕ್ಕೂ ಇವಳು ಅನುಕೂಲೆಯಾಗಬಹುದಿತ್ತು. ಆದರೆ ಸ್ತ್ರೀ, ಬರಿ ಕಾಮಿನಿ ಅಲ್ಲ . ಅವಳ ಸ್ವಭಾವದಲ್ಲಿ ಪ್ರೇಮ ಮಮತೆಯೂ ಇದೆ.

ಅವಳು ಮುಂದೆ ಹಿಡಿದ ಹಣ್ಣಿನ ತಟ್ಟೆಯಿಂದ ದಾಳಿಂಬದ ತುಂಡನ್ನು ಎತ್ತಿಕೊಂಡೆ. ಕೂಡಲೆ ಅವಳು ತಟ್ಟೆ ಕೆಳಗಿಟ್ಟು ನನ್ನ ಕೈಯಿಂದ ದಾಳಿಂಬವನ್ನು ಮೃದುವಾಗಿ ತೆಗೆದುಕೊಂಡು ಅದರ ಮಾಣಿಕಗಳನ್ನು ತೆಗೆದು ನನ್ನ ಕೈಗಿತ್ತಳು. ಅವಳ ವರ್ತನೆಯ ಒಂದೊಂದು ಕ್ರಿಯೆಯಲ್ಲಿಯೂ ಇಂದು ಉತ್ಸಾಹವಿತ್ತು. ಅನಿರ್ಬಂಧತೆ ಇತ್ತು.

ನಾನು ದಾಳಿಂಬದ ಕಾಳುಗಳನ್ನು ಬಾಯಿಗೆ ಹಾಕಿ ಕೊಳ್ಳುತ್ತ ಹೇಳಿದೆ.

''ತೆಗೆದುಕೋ ನೀನೂ ಸ್ವಲ್ಪ'' ಎಂದು ನನ್ನ ಕೈಯಲ್ಲಿ ಮಿಕ್ಕ ಕಾಳುಗಳನ್ನು ಅವಳಿಗೆ ಕೊಟ್ಟೆ.

''ಪ್ರಸಾದ! ಧನ್ಯಳಾದೆ......''

ಅವಳ ಧ್ವನಿಯಲ್ಲಿಯೂ ಅದೇ ಸ್ವೀಕಾರದ ಭಾವನೆ. ನನಗೆ ತುಂಬ ಸಂತೋಷವೆನ್ನಿಸಿತು. ಅವಳು ಮನಃಪೂತಳಾಗಿ ನನ್ನನ್ನು ಅಂಗೀಕರಸಿದಳು. ನನ್ನ ಚಿತ್ತ ಪ್ರಸನ್ನ ವಿತ್ತು. ರಾತ್ರಿಯ ಗಳಿಗೆಗಳು ಒಂದೊಂದಾಗಿ ಉರುಳಿದವು.

ರತಾಂತದಲ್ಲಿ ಅವಳು ನನ್ನ ಚರಣ ಚುಂಬಿಸಿ ಪಾದ ರೇಣುಗಳನ್ನು ಹಣೆಗಿಟ್ಟಳು.!

ನಾನು ಚಕಿತನಾದೆ.

ತಲೆಬಾಗಿ ತನ್ನನ್ನು ಸಾವರಿಸಿಕೊಳ್ಳುತ್ತ ಬಾಗಿಲವರೆಗೆ ಹೋದ ಅವಳನ್ನು ಕರೆದು ತಂದು ನಾನು ಪುನಃ ಮಂಚದ ಮೇಲೆ ಕುಳ್ಳಿರಿಸಿದೆ. ರತಾಂತದ ಕ್ರಮ ತಪ್ಪಿದ್ದರಿಂದ ನನ್ನಲ್ಲಿ ಅವಳ ಬಗ್ಗೆ ಬಲವಾದ ಶಂಕೆ ಬಂತು.

''ನೀನು ನಿಜವಾಗಿಯೂ ಅಂಬಿಕೆಯೆ?''

ಅವಳ ಮುಖ ಒಮ್ಮೆಲೇ ವಿವರ್ಣವಾಯಿತು. ಅಪರಾಧ ಭರದಿಂದ ನಡುಗ ಹತ್ತಿದಳು. ಮೈ ಬೆವೆತು ಹೋಯಿತು. ಅತ್ಯಂತ ಅಧೀರಳಾದ ಅವಳನ್ನು ಸಾಂತ್ವನಗೊಳಿಸುತ್ತ ಹೇಳಿದೆ.

''ಭೀತಳಾಗಬೇಡ. ನೀನು ಯಾರು? ಅಂಬಿಕೆಯಲ್ಲ. ನನಗೆ ಗೊತ್ತಾಗಿದೆ.

ಅವಳು ಕಂಬನಿಗರೆದು ಅಳ ಹತ್ತಿದಳು. ಮತ್ತೆ ದೀನಳಾಗಿ ನನ್ನ ಮುಖವನ್ನೊಮ್ಮೆ ನೋಡಿ, ನಿಂತ ನೆಲವನ್ನು ನೆನೆಸ ಹತ್ತಿದಳು.

ನಾನು ಅವಳ ಹತ್ತಿರ ಹೋಗಿ ಅವಳ ಮುಖವನ್ನು ಮೇಲೆತ್ತಿ ''ಹೇಳು, ಹೆದರ ಬೇಡ. ನೀನು ಭಾಗ್ಯಶಾಲಿನಿ. ಖ್ಯಾತನಾದ ಮಗನನ್ನು ಪಡೆಯುವಿ. ನೀನು ಯಾರು ಹೇಳು? ''

''ಕ್ಷ-ಮಿ-ಸ-ಬೇ-ಕು-.''

''ಕ್ಷಮಿಸುವ ಮಾತೇ ಇಲ್ಲ. ನಾನು ನಿನಗೆ ಅನುಗ್ರಹ ಮಾಡಿದ್ದೇನೆ. ನಿನಗೆ ಮಂಗಳವಾಗಲಿ. ಹೇಳು ಬಾಲೆ, ನೀನು ಯಾರು ?''

ನನ್ನ ಆಶ್ವಾಸನೆಯಿಂದ ಅವಳಿಗೆ ಕೊಂಚ ಧೈರ್ಯ ಬಂದಂತಾಯಿತು. ಸೆರಗು ಸರಿಪಡಿಸಿಕೊಳ್ಳುತ್ತ ಕಣ್ಣೊರೆಸಿಕೊಂಡು ಆಕೆ ಹೇಳಿದಳು.

''ನಾನು ಮಹಾರಾಣಿಯವರ ಅಂತಃಪುರದ ದಾಸಿ'' ನಾನು ಇನ್ನೂ ಚಕಿತನಾಗಿ ಕೇಳಿದೆ.



''ನೀನು ಇಲ್ಲಿಗೆ ಬಂದ ಕತೆಯನ್ನು ಹೇಳು. ಇಲ್ಲವಾದರೆ..... ''

ನನ್ನ ಧ್ವನಿಯಲ್ಲಿಯ ನಿಷ್ಠುರತೆಯಿಂದ ಅವಳು ಗಡಗಡನೆ ನಡುಗಿ ನನ್ನ ಪಾದಕ್ಕೆ ಹಣೆ ಹಚ್ಚಿ ಕಂಬನಿಯಲ್ಲಿ ಅವನ್ನು ತೊಳೆದಳು. ನನಗೆ ಈ ಆಟದ ಹಿಂದಿನ ಸೂತ್ರಧಾರರ ಬಗ್ಗೆ ಪೂರ್ಣ ತಿಳುವಳಿಕೆಯಾಗಿತ್ತು.

ಮಹಾರಾಣಿ ಅಂಬಿಕಾ ದೇವಿಯವರು ಈಗ ಮೂರು ದಿನಗಳ ಹಿಂದೆ ನನಗೆ ಆಭರಣ, ದುಕೂಲ ವಸ್ತ್ರವನ್ನು ಬಹುಮಾನವಾಗಿ ಕೊಟ್ಟರು. ಅಂತಃಪುರದಲ್ಲಿ ಈ ತರದ ಬಹುಮಾನಗಳು ನಮ್ಮನ್ನು ಸುಖದಿಂದ ಇರಲು ಕೊಡಲಾಗುವುದಿಲ್ಲ. ನಾವು ಮಾಡಿದ ಒಳ್ಳೆಯ ಕೆಲಸಕ್ಕೆ ಇವು ಪ್ರತಿಫಲವಾಗಿಯೂ ಇರುವುದಿಲ್ಲ. ನಮ್ಮಿಂದ ತಮಗೆ ಒಳ್ಳೆಯದೆಂದು ತೋಚಿದ ಕೆಲಸವನ್ನು ಮಾಡಿಸಿಕೊಳ್ಳಲು ಇದು ಮುಂಗಡವಾಗಿ ಕೊಡಲಾಗುತ್ತಿದೆ..... ''

ರಾತ್ರಿಯನ್ನೆಲ್ಲ ಬಹು ಶಾಲೀನತೆಯಿಂದ ಕಳೆದ ಇವಳು ಇಷ್ಟು ಮಾತುಗಾತಿ ಇರಬಹುದೆಂದು ಎಣಿಸಿರಲಿಲ್ಲ. ದಾಸಿ, ಅದೂ ಅರಮನೆಯವಳು. ಅದರಲ್ಲಿಯೂ

ಅಂತಃಪುರದವಳೆಂದ ಬಳಿಕ ಅವಳಿಗೆ ಇಷ್ಟು ವಾಚಾಳಿಕೆ ಅಸಂಭವವಲ್ಲ. ಅವಳ ಕತೆ ನನ್ನ ಸಂಶಯವನ್ನು ದೃಢಪಡಿಸಿದರೂ ಬುದ್ಧಿವಂತಿಕೆಯ ವಿವರಗಳಿಂದ ಕೂಡಿತ್ತು.

''ಹೂಂ......... ಮುಂದೆ.''

''ಮಹಾರಾಣಿಯವರು ಇವುಗಳನ್ನು ನಿನಗಾಗಿ ತೆಗೆದುಕೊ. ನೀನು ನನ್ನ ಮನ ಮೆಚ್ಚಿಗೆಯವಳು, ನಿನ್ನ ಕಂಡರೆ ನನಗೆ ವಿಶೇಷ ಅಭಿಮಾನ ಎಂದರು. ಅವರ ಒಂದೊಂದು ಮಾತಿನಲ್ಲೂ ನನಗೆ ಕೃತ್ರಿಮತೆ ಕಾಣುತ್ತಿತ್ತು. ಆದರೆ ಅವುಗಳನ್ನೆಲ್ಲ ನಾವು ಗಣನೆಗೆ ತಂದು ನಮ್ಮ ಹೃದ್ಗತವನ್ನು ಹೇಳಿದರೆ ನಾವು ಅರಮನೆಯಲ್ಲಿ ಬದುಕವುದು ಸಾಧ್ಯವೆ- -?

''ನಮ್ಮ ಬೇಕು ಬೇಡಗಳನ್ನು ಬಲಿಕೊಟ್ಟು , ದೇವಿಯವರು ಹೇಳಿದ್ದಕ್ಕೆ ಸರಿ ಎಂದು ತಲೆದೂಗುವ ಪ್ರಾಣಿಯಾಗಿ ನಾವು ಅಂತಃಪುರದಲ್ಲಿ ಬದುಕುತ್ತೇವೆ. ಅವರ ಇಚ್ಛೆಗೆ ವಿರೋಧವಾಗಿ ನಡೆದರೆ --ರಾಣಿಯವರು ತಪಸ್ವಿಗಳಿಗಿಂತಲೂ ಭಯಂಕರರು - ಕ್ರೂರರು! ರಾಣಿಯರ ಕೋಪ, ತಪಸ್ವಿಗಳ ಶಾಪಕ್ಕಿಂತ ಭಯಾನಕ! ''

ನನಗೆ ನಗು ಬಂತು ... ದಾಸಿ ಮೆಲ್ಲನೆ ಕಳ್ಳ ದೃಷ್ಟಿಯಿಂದ ನೋಡಿ ನಾಲಗೆ ಕಚ್ಚಿದಳು. ಒಂದು ಕ್ಷಣ ತಬ್ಬಿಬ್ಬಾದಳು.

''ಹೇಳು , ನಿನ್ನ ವಿವೇಕಕ್ಕೆ ಏನನ್ನು ಹೇಳಬೇಕೆನಿಸುತ್ತದೆ ಅದೆಲ್ಲವನ್ನೂ ನಿರ್ಭಯಳಾಗಿ ಹೇಳು.''

''ಎಲ್ಲ ದಾಸಿಯರೂ ವಾಚಾಳರೇ ಆಗಿರುತ್ತಾರೆ. ಅದರಲ್ಲಿ ನಾನು ಸ್ವಲ್ಪ ಸುಪ್ರಸಿದ್ಧ. ನಿಮ್ಮ ಮುಂದೆ ನಿಲ್ಲಬಾರದು. ಅಪರಾಧ ಮಾಡಿದರೂ ನನ್ನ ವಾಚಾಳತನ ಕಡಿಮೆಯಾಗದಷ್ಟು ನಿರ್ಭೀತವಿದೆ. ......''

ನನಗೆ ನಗೆ ಬಂತು. ಆ ಉದ್ವೇಗಕರ ಸನ್ನಿವೇಶದಲ್ಲೂ.

''ಅದಿರಲಿ ಮುಂಧೆ ನಡೆದುದನ್ನು ಹೇಳು'' ಎಂದೆ.

''ನಮ್ಮ ಮಹಾರಾಣಿ ನನ್ನನ್ನು ತಮ್ಮ ಮಂಚದ ಮೇಲೆ ಕುಳ್ಳಿರಿಸಿಕೊಂಡು ಬೆನ್ನ ಮೇಲೆ ಕೈಯಾಡಿಸುತ್ತಾ ''ಏಕೋ ಬಹಳ ಸೊರಗಿ ಹೋಗಿದ್ದೀ? ಏನು ಚಿಂತೆ?'' ಎಂದರು. ನನಗೆ ಅವರ ಪ್ರತಿಯೊಂದು ಮಾತೂ ಮುಂದೆ ಅವರು ಯಾವುದೇ ಕೆಲಸವೊಂದನ್ನು ನನ್ನ ತಲೆಯ ಮೇಲೆ ಹೇರುತ್ತಾರೆ ಎಂಬುದನ್ನು ಹೇಳುತ್ತಿತ್ತು. ಅವರ ಆ ಪ್ರಶ್ನೆಯನ್ನು ನಾನು ವಿನೋದದಲ್ಲಿ ಅದ್ದ ಬೇಕೆಂದು - ನೀವು ಕೈ ತುಂಬ ಸುಂದರ ಮಗುವನ್ನು ಎತ್ತಿ ಆಡಿಸುತ್ತೀರಿ, ನನ್ನ ಕೈ ಬರಿದು ..... ಎಂದೆ. ನಿಜವಾಗಿ ನನಗೆ ಆ ವೇದನೆ ಇದ್ದಿಲ್ಲವೆಂದಲ್ಲ. ಆದರೆ ಹಗಲಿರುಳೂ ಅದನ್ನೇ ಹಚ್ಚಿಕೊಂಡು ನಡೆದರೆ ದಾಸಿಯಾದ ನಮ್ಮ ಬದುಕು ಹೇಗೆ ಸಾಗಬೇಕು? ನಾನು ಇದ್ದ ಆ ದುಃಖವನ್ನು ಬದಿಗೊತ್ತಿ ಅರಮನೆಗೆ ಬರುತ್ತಿದ್ದೆ. ರಾಣಿಯರು ನಕ್ಕರೆ ನಮಗೆ ದುಃಖ ಉಕ್ಕಿ

ಬಂದರೂ ಒಳಗೊತ್ತಿ ನಗಬೇಕು. ಅವರು ಅತ್ತರೆ ನಮಗೆ ನಗೆ ಬಂದರೂ ಕಣ್ಣೀರು ಇಲ್ಲದಿದ್ದರೂ ಹಾಡಿ ಹಾಡಿ ಅಳಬೇಕು. ನಟನೆ ನಮ್ಮ ಬದುಕಾಗಿತ್ತು.''

ನನಗೆ ದಾಸಿಯ ಸುತ್ತುವರಿದ ಸುದ್ದಿ ಬೇಡವಾಗಿತ್ತು. ಆದರೆ ಅದು ಅವಳ ಸ್ವಭಾವವೇ. ನನಗೆ ಬೇಕಾದುದನ್ನು ತಿಳಿಯಲು ತಾಳಿಕೊಳ್ಳದೆ ಗತ್ಯಂತರವಿಲ್ಲ.

ನಿನಗೆ ಮಕ್ಕಳು ಬೇಕೆ-- ? ಎಂದು ಕಣ್ಣಗಳನ್ನು ಅರಳಿಸಿ, ರಾಣಿಯರು ಆತುರ ತೋರಿಸಿ ಕೇಳಿದರು.

''ಮಕ್ಕಳನ್ನು ಯಾರು ಬೇಡವೆಂದಾರು ಮಹಾತಾಯಿ ? ಒಂದಲ್ಲ, ಹತ್ತಾದರೂ ನನಗೆ ಸಾಲದು. ಆದರೆ ದೈವದಲ್ಲಿ ನಮಗೆ ಆ ಭಾಗ್ಯವನ್ನು ಎಲ್ಲಿ ಬರೆದಿದೆ.. ?'' ಎಂದೆ. ನನ್ನ ಈ ಮಾತು ಹೃದಯದ್ದೇ ಆಗಿತ್ತು. ನನಗೆ ಮಕ್ಕಳಿಲ್ಲದ್ದಕ್ಕೆ ತುಂಬ ವ್ಯಥೆ ಇತ್ತು.

''ನಿನಗೆ ನಾನು ಮಕ್ಕಳನ್ನು ಕೊಡುತ್ತೇನೆ --'' ಮಹಾ ರಾಣಿಯವರು ನುಡಿದರು. ಮಹಾರಾಣಿಯವರು ಮೆತ್ತಗಾದಾಗ ನಾವು ಆಗಾಗ ಬಿರುಸಾಗುತ್ತಿದ್ದುದೂ ಉಂಟು. ''ನಿಮಗೇ ಮಕ್ಕಳು ಬೇಕಾದಾಗ ನಮಗೆ ಹೇಗೆ ಕೊಡ ಬಲ್ಲಿರಿ? '' ನಾನು ರಾಣಿಯವರನ್ನು ಮೂದಲಿಸಿ ನುಡಿದೆ. ''ನನಗೆ ಮಕ್ಕಳು ಬೇಕು ಆದರೆ........''

27393

'' ಮಹಾರಾಣಿ ಒಮ್ಮೆಲೆ ದುಃಖದಿಂದ ಕಾತರಗೊಂಡರು. ಅವರು ದುಃಖಾರ್ತರಾದಾಗ ನಾವು ಅವರನ್ನು ಉಪಚರಿಸಲೇಬೇಕು. ಅವರನ್ನು ಸಂತೈಸಿ ಕೇಳಿದಾಗ ತಮಗೆ ಮೊದಲ ಮಗುವಾದ ಕತೆಯನ್ನು ಹೇಳಿದರು. ನಾನು ಆಶ್ಚರ್ಯ ಉದ್ವೇಗಗಳನ್ನು ನುಂಗಿಕೊಂಡೆ. ''ಈಗ ಏನು? '' ಎಂದು ಕೇಳಿದೆ.

''ಅತ್ತೆಯವರ ಮನಸ್ಸಿನಲ್ಲಿ ನಾನು ಇನ್ನೊಮ್ಮೆ ನಿಯೋಗ ವಿಧಿಯಿಂದ ಸಂತಾನ ಪಡೆಯಬೇಕೆಂದಿದೆ. ಆದರೆ - ಹೇಳು, ನೀನೇ ಹೇಳು. ಸಾಮ್ರಾಟನ ಕೈಹಿಡಿದು ಅಂದಣದಲ್ಲಿ ಮೆರೆಯುವ ನಾನು ಆ ಕಾಡು ಮನಷ್ಯನ ಜತೆಗೆ...... ''

''ತಾಳಿ ಕೊಳ್ಳಿರಿ'' ಎಂದೆ.

''ಇಲ್ಲ ನನಗೆ ಸಾಧ್ಯವಿಲ್ಲ, ಅವರ ಜತೆಗೆ ಏಕಾಂತದಲ್ಲಿರುವುದನ್ನು ನಾನು ಸಹಿಸಲಾರೆ......''

''ನನ್ನ ರಾಣಿಯ ದೌರ್ಭಾಗ್ಯದ ಬಗ್ಗೆ ನನಗೆ ಮರುಕ ಬಂದಿತ್ತು. ಆದರೂ ಪಶ್ಚಿಮಕ್ಕೆ ಅವರು ಪೂರ್ವವೆಂದರೆ - ನಾವು '' ತಥಾಸ್ತು '' ಎನ್ನಲೇಬೇಕು.

''ಮಹಾರಾಣಿಯವರು ಮೆಲ್ಲನೆ ನನ್ನ ಕಿವಿಯಲ್ಲಿ ಹೇಳಿದರು. ನನಗಾಗಿ ನೀನು ಈ ದಿನ ಶಯ್ಯಾಗಾರದಲ್ಲಿರು. ನಿನಗೆ ಮಕ್ಕಳ ಹಂಬಲವಲ್ಲವೆ? ಒಂದು ಕೆಲಸದಿಂದ ಎರಡು ಫಲ. ಈ ಕಾರ್ಯ ಮಾಡಿದರೆ ನಿನಗೆ ಇನ್ನೂ ತುಂಬ ಬಹುಮಾನ............''

''ಮಹಾರಾಣಿಯವರ ಮಾತು ಕೇಳಿದ ಕೂಡಲೆ ನನ್ನ ಆಶೆ ಗರಿಗೆದರಿತು. ನಾನು ನೂರು ಜನ್ಮದಲ್ಲಿಯೂ ಪಡೆಯದ ಭಾಗ್ಯವನ್ನು ಪಡೆಯುವೆ ಎಂದೆನ್ನಿಸಿತು. ಆದರೆ ರಾಣಿಯರ ದುರ್ದೈವದ ಬಗ್ಗೆಯೂ ಕನಿಕರ ಬಂತು. ನಾನೆಲ್ಲ ಉದಾರಳಾಗಿ ಈ ಭಾಗ್ಯವನ್ನು ರಾಣಿಗೇ ಬಿಟ್ಟುಕೊಡಬೇಕೆಂದರೆ ರಾಣಿ ಅದನ್ನೆಂದೂ ಒಪ್ಪುತ್ತಿರಲಿಲ್ಲ. ಅಲ್ಲ; ನನ್ನ ಪಾಲಿನ ಭಾಗ್ಯವು ಇನ್ನಾವಳಾದರೂ ದಾಸಿಯ ಪಾಲಾಗುತ್ತಿತ್ತು. ರಾಣಿಗಾಗಿ ನಾನು ಭಾಗ್ಯವನ್ನು ಬಿಟ್ಟು ಕೊಡಲುಸಿದ್ಧಳಿದ್ದರೂ ಇತರ ದಾಸಿಯರಿಗೆ ನಾನಿದನ್ನು ಬಿಟ್ಟು ಕೊಡುವಷ್ಟು ಹುಚ್ಚಳಲ್ಲ; ಉದಾರಳೂ ಅಲ್ಲ......

''ತಮ್ಮಂತಹವರು ಹಾಯ್ದು ಹೋದ ನೆಲವನ್ನೂ ಮುಟ್ಟಲು ಯೋಗ್ಯತೆ ಇಲ್ಲದ ನನಗೆ ಇಂತಹ ಭಾಗ್ಯ ಬಂದುದು ನನ್ನ ಅಪಾರ ಪುಣ್ಯವೆನ್ನಿಸಿತು.''

''ಎರಡು ದಿನಗಳು ಇಪ್ಪತ್ತು ವರುಷಗಳಷ್ಟು ಉದ್ದವಾಗಿದ್ದವು. ನನಗಿಂದು ಹತ್ತು ಜನ್ಮದ ಭಾಗ್ಯ ಒಂದು ಗೂಡಿದಂತಾಯಿತು. ನನ್ನ ಸಂತಾನ ಒಳ್ಳೆಯದಾಗಿ ಬೆಳೆಯಲಿ, ಬಿಡಲಿ. ನನ್ನ ಧನ್ಯತೆಗೆ ಸೀಮೆಯುಂಟೆ? ಮಹಾರಾಣಿಯವರು ಈ ದಿನ ನನಗೆ ತಮ್ಮ ವೇಷ, ಭೂಷಣ ಕೊಟ್ಟರು. ಇವು ನಿನ್ನವೇ ಎಂದು ಹೇಳಿದರು. ನನಗೆ ಅದಕ್ಕಿಂತ ಸಾವಿರ ಪಟ್ಟು ದೊಡ್ಡ ಭಾಗ್ಯ ಕೈ ಸೇರುವುದೆಂದು ಹಿಗ್ಗಿದ್ದೆ. ಅವರ ಅನುಮತಿ ಮೇರೆಗೆ ನಾನು ಬಂದೆ, ಅವರು ಶಯನಾಗಾರದಲ್ಲಿ ನಾನು ನಡೆದುಕೊಳ್ಳಬೇಕಾದ ವಿಧಿ ಹೇಳಿದ್ದರು. ಅವನ್ನೆಲ್ಲ ಮಾಡಿದ್ದೆ. ನನ್ನ ಹೆಚ್ಚಿದ ಹಿಗ್ಗು ಕೊನೆಗೆ ನನ್ನನ್ನು ತಪ್ಪಿನಲ್ಲಿ ಸಿಕ್ಕಿಸಿತು.

''ರಾಣಿಯವರು ಎಚ್ಚರಿಸಿದ್ದರು.

''ಒಳಗೆ ನೀನು ಕ್ಷತ್ರಿಯಳು - ಮಂಚದಿಂದ ಇಳಿದು ಬರುವಾಗ ಅವರ ಬಾಹುವನ್ನು ಚುಂಬಿಸಿ ಬಾ'' ಎಂದಿದ್ದರು. ಆದರೆ- ನನ್ನ ಸಂಸ್ಕಾರ ಬಲದಿಂದ ನಾನು ತಮ್ಮ ಪಾದ ಚುಂಬಿಸಿದೆ. ನಿಜ ಅದೇ ನನಗೆ ಭಾಗ್ಯ ಸ್ಥಾನ...... ''

ನಾನು ನಿರ್ಭರನಾಗಿ ಅವಳ ಕತೆ ಕೇಳುತ್ತಿದ್ದೆ.

''ಹೋಗು, ಧರ್ಮವಂತನಾದ ಪ್ರಶಾಂತ ಪ್ರಾಜ್ಞ ಮಗನನ್ನು ಪಡೆಯುತ್ತೀ..... ''

ದಾಸಿ ಇನ್ನೊಮ್ಮೆ ನನ್ನ ಚರಣದಲ್ಲಿ ಹಣೆ ಇಟ್ಟು ವಂದಿಸಿ ಶಯ್ಯಾಗಾರದಿಂದ ಹೊರಗೆ ಹೋದಳು.

ಬೆಳಗಿನ ಆಹ್ನಿಕಗಳು ಮುಗಿದ ಬಳಿಕ ತಾಯಿ ಬಂದಳು. ಅವಳಿಗೆ ಸೊಸೆಯ ನಿರ್ಭಾಗ್ಯವನ್ನು ಹೇಳಿದೆ. ಉಸಿರಿಟ್ಟಳು. ಹೃದಯ ಹರವಾಗದೆ, ಕಾಲ ಪಕ್ವವಾಗದೆ, ಜೀವಕ್ಕೆ ಗೌರವ ಬರಲಾರದೆಂದು ತಾಯಿಗೆ ತಿಳಿಸಿದೆ.

ಅವಳು ಅತ್ಯಂತ ನಿರಾಶೆಯಿಂದ-

''ತಪ್ಪು ನನ್ನ ಆತುರತೆಯದು. ನೀನು ಎಷ್ಟು ಹೇಳಿದರೂ ಕೇಳಲಿಲ್ಲ. ಆಯಿತು ಹಸ್ತಿನಾವತಿಯನ್ನು ಮರೆಯಬೇಡ'' ಎಂದಳು.

ತಾಯಿ ಹೊರಟು ಹೋದ ಬಳಿಕ ನಾನು ಭೀಷ್ಮ ನೊಡನೆ ಬಹಳ ಹೊತ್ತು ಮಾತನಾಡಿದೆ. ನಾರದರು ಇತ್ತೀಚೆ ಇನ್ನು ಮುಂದೆ ಹಸ್ತಿನಾವತಿ ದೇವಕಾರ್ಯದ ಪ್ರಧಾನ ಪೀಠವಾಗುವುದು ಎಂಬ ಅಂಶವನ್ನು ಹೇಳಿದರು. ಆಗ ಭೀಷ್ಮ ಕೂಡ ಇದೇ ಮಾತನ್ನು ಪುಷ್ಟೀಕರಿಸುವಂತೆ-

27393

''ಆಚಾರ್ಯ ಧೌಮ್ಯರು, ನಾರಾಯಣನ ಕರ್ಮ ಭೂಮಿಯಾಗಿ ಹಸ್ತಿನಾವತಿ ಬೆಳಗುತ್ತದೆ ಎಂದು ಹೇಳಿದರು. ಆದರೆ ಅದನ್ನು ನೋಡುವ ಭಾಗ್ಯ ಇದೆಯೋ ಇಲ್ಲವೊ!''

''ಭೀಷ್ಮ' ನಿನ್ನ ಮನಸ್ಸಿನಲ್ಲಿಯೆ ದೇವಸತ್ವವಿದೆ - ನೀನು ಬಯಸಿದ್ದು ಸಿದ್ಧಿಸೀತು-''

''ಪೂಜ್ಯರಿಗೆ ಒಂದು ವಿಜ್ಞಾಪನೆ - ಹಸ್ತಿನಾವತಿಯನ್ನು ಮರೆಯದಿರಿ - ನಾವು ಸಂಕಟದಲ್ಲಿ ನೆರವಿಗಾಗಿ ತಮ್ಮತ್ತ ಧಾವಿಸುತ್ತೇವೆ - ಅನುಗ್ರಹಿಸಬೇಕು......''

ಭೀಷ್ಮನ ಹೃದ್ಗತದ ಅರಿವಾಯಿತು. ನಾನು ಧೌಮ್ಯರನ್ನು ಕಂಡು ಹೋಗಬೇಕೆಂದು ಹೇಳಿದ್ದೆ. ಆದರೆ ಅವರು ಕಾಮರೂಪದ ಒಂದು ಯಾಗಕ್ಕಾಗಿ ಹೋಗಿದ್ದರು. ಆಗಲಿಲ್ಲ. ಹಸ್ತಿನಾವತಿಯಿಂದ ಮರಳಿದೆ.

# ಶುಕ ಜನನ

ಜೀವನದಲ್ಲಿ ಎಲ್ಲ ವರುಷಗಳಲ್ಲಿಯೂ ಮಹಾ ಘಟನೆಗಳು ಜರುಗಲಾರವು. ವಿಶೇಷ ಘಟನೆಗಳು ನಡೆಯದ ದಿನಗಳು ರಿಕ್ತವಾಗಿರುವುದಿಲ್ಲ. ಬಹುತರವಾಗಿ ಆ ದಿನಗಳು ಮುಂದಿನ ಮಹಾ ಘಟನೆಗಳಿಗಾಗಿ ಸಿದ್ಧತೆ ಮಾಡುತ್ತಿರಬಹುದು. ಇಲ್ಲವೆ ಹಿಂದೆ ನಡೆದ ಘಟನೆಗಳಿಗೆ ಅಗತ್ಯವಾದ ವಿಶ್ರಾಂತಿಯ ದಿನಗಳೂ ಆಗಿರಬಹುದು.

ಬದುಕಿಗೆ ಎಚ್ಚರವೂ ಅವಸ್ಥೆಯಾಗಿರುವಂತೆ ನಿದ್ದೆಯೂ ಒಂದು ಸ್ಥಿತಿ. ಹಸ್ತಿನಾವತಿಯಿಂದ ನಾನು ಬಂದ ಬಳಿಕ ಅನೇಕ ದಿನಗಳ ವರೆಗೆ ತಪಸ್ಸು ಮಾಡುವ ಭಾಗವಿತ್ತು. ಹಿಮಗಿರಿಯ ಅಂಚಿನಲ್ಲಿ ನಿಂತುಕೊಂಡು ತಪಸ್ಸಿನಲ್ಲಿ ತೊಡಗಿದ್ದೆ. ನನ್ನನ್ನು ಹತ್ತು ದಿಕ್ಕಿನಿಂದ ಕೆಲಸಗಳು ಹಿಂದೆ ಕರೆಯುತ್ತಿದ್ದವು. ನನಗೆ ಬೇಕಾದ ಮಹಾ ಶಕ್ತಿಗಾಗಿ ತಪಸ್ಸೂ ಅಗತ್ಯವಿತ್ತು.

ಹಸ್ತಿನಾವತಿಯ ಸಂಬಂಧ ಕೇವಲ ನಿಯೋಗ ವಿಧಿಯಿಂದಲೆ ಮುಗಿಯಲಿಲ್ಲ. ಘಟನೆಗಳನ್ನು ನಿಮಿತ್ತ ಮಾಡಿಕೊಂಡು ಹಸ್ತಿನಾವತಿ ನನ್ನನ್ನು ಸೆಳೆದಿತ್ತು. ರಾಜಕೀಯದ ಸಂಬಂಧ ಮನುಷ್ಯನಿಗೇಕೆ? ದೇವನಿಗೆ ಬಂದರೂ ಅದು ಅವನ ಜೀವಕ್ಕೇ ಅಂಟಿಕೊಳ್ಳುತ್ತದೆ. ರಾಜರಾದವರು ಜೀವನದಲ್ಲಿ ಕೆಲವು ದಿನ ರಾಜಕೀಯ ಮಾಡಿ ಬಳಿಕ ಬೇರೆ ಬದುಕುತ್ತಾರೆ. ಋಷಿಗಳು ರಾಜರ ಮಾನಸಿಕ ಆರೋಗ್ಯವನ್ನು ಗಮನಿಸಿ ಅದನ್ನು ಧರ್ಮವೆಂದೇ ಅವರ ಕೊರಳಿಗೆ ಕಟ್ಟಿದ್ದಾರೆ. ಕ್ಷತ್ರಿಯರು ಜೀವನದುದ್ದಕ್ಕೂ ರಾಜಕೀಯದಲ್ಲಿ ಇರುವುದು ಅವರಿಗೆ ಮಾತ್ರವಲ್ಲ ದೇಶಕ್ಕೂ ಅನರ್ಥಕಾರಿ.

ಈ ಅವಧಿಯಲ್ಲಿ ದೇಶದ ಹಲವಾರು ಗುರುಕುಲಗಳಲ್ಲಿ ಬ್ರಹ್ಮಸೂತ್ರವು ಪಾಠಕ್ರಮದಲ್ಲಿ ಸೇರಿ ಅದರ ಅಧ್ಯಯನ ನಡೆಯುತ್ತಿತ್ತು. ದೂರ ದೂರದ ಗುರುಕುಲಗಳಿಂದ ಬ್ರಹ್ಮಸೂತ್ರದ ವಿವರಣೆಗಾಗಿ ಅಧ್ಯಾಪಕರು ಆಗಾಗ ಶಮ್ಯಾಶ್ರಮಕ್ಕೆ ಬಂದು ಹೋಗುತ್ತಿದ್ದರು. ಅನೇಕ ಗುರುಕುಲದ ಅಧ್ಯಾಪಕರು ಸೂತ್ರಗಳಿಗೆ ತಮಗೆ ತೋಚಿದ ವಿವರಣೆ ಕೊಡುತ್ತಿರುವುದನ್ನು ನಾರದರು ನನಗೆ ಹೇಳಿದರು.

ಅವರು ತ್ರಿಗರ್ತ ಗುರುಕುಲದಲ್ಲಿ ನಡೆದ ಸಂದರ್ಭ ಒಂದನ್ನು ನನ್ನ ಗಮನಕ್ಕೆ ತಂದು ಬ್ರಹ್ಮಸೂತ್ರಗಳಿಗೆ ಅಭಿಪ್ರಾಯಾಂತರವಾಗದಂತೆ ನಾನು ಒಂದು ವಿವರವಾದ ಅನುವೃತ್ತಿಯನ್ನು ಬರೆಯಬೇಕೆಂದು ಹೇಳಿದರು. ನನ್ನ ವಿವರಣೆಯನ್ನು ತಮ್ಮ ರೀತಿಯಲ್ಲಿ ಅರ್ಥಮಾಡಿಕೊಂಡರೆ ನಾನು ಆಶ್ಚರ್ಯಪಡಬೇಕಾಗಿಲ್ಲ. ಅಭಿಪ್ರಾಯವು ವ್ಯಕ್ತಿಗೆ ಸೇರಿದ್ದು. ಬ್ರಹ್ಮಸೂತ್ರವನ್ನು

ಕೈಗೆತ್ತಿಕೊಂಡು ಓದುವ ಪ್ರತಿಯೊಬ್ಬನ ತಲೆಯಲ್ಲೂ '' ನೀನು ತಿಳಿದ ಅಭಿಪ್ರಾಯ ಸ್ವಸ್ಥದಲ್ಲ ಎಂದಾಗಲಿ, ಇಲ್ಲವೆ ನೀನು ಬಹಳ ಸರಿಯಾಗಿಯೆ ಅರ್ಥ ಮಾಡಿಕೊಂಡಿದ್ದೀ ಎಂದಾಗಲಿ ನಾನೇ ವ್ಯವಸ್ಥೆ ಮಾಡುವುದು ಹೇಗೆ ಸಾಧ್ಯ? ನನ್ನನ್ನು ತಮ್ಮ ಯೋಗ್ಯತೆಯ ಮೇರೆಗೆ ಅರ್ಥ ಮಾಡಿಕೊಳ್ಳುತ್ತಾರೆ; ಮಾಡಿಕೊಳ್ಳಲಿ. ''

ನಾನು ನಾರದರನ್ನು ವಿನಂತಿಸಿದೆ. ನಾರದರು ಕೆಲವು ದಿನ ಶಮ್ಯಾಶ್ರಮದಲ್ಲಿ ತಂಗುವುದು ಅಗತ್ಯವಿತ್ತು. ಈಗ ಕೆಲ ವರುಷಗಳಿಂದ ವಿಶ್ವಾವಸು ಹಾಗು ಅನೇಕ ನನ್ನ ಸಹಕಾರಿಗಳು ಶತದ್ರು ತೀರದಿಂದ ಬಂದು ಶಮ್ಯಾಶ್ರಮದಲ್ಲಿಯೆ ನೆಲಸಿದ್ದಾರೆ.

ನಾಲ್ಕು ಪುರಾಣಗಳ ರಚನೆ ಈಗಾಗಲೆ ಮುಕ್ತಾಯಗೊಳ್ಳುತ್ತ ಬಂದಿತ್ತು. ಪ್ರತಿ ಸಲವೂ ನಾಲ್ಕಾರು ಗುರು ಕುಲಗಳಿಂದ.ನಾನು ಈ ವಿಭಾಗದಲ್ಲಿ ಕೆಲಸ ಮಾಡಲು ಸ್ನಾತಕರನ್ನು ಕೇಳುತ್ತಿದ್ದೆ. ಹೀಗಾಗಿ, ನೂರಾರು ಜನ ದೇಶದ ವಿವಿಧ ರಾಜ್ಯಗಳಲ್ಲಿ, ಕಾಡುಗಳಲ್ಲಿ ಸಂಚರಿಸಿ ತಪಸ್ಸು ಮಾಡಿ ವಿವರಗಳನ್ನು ಪೂರೈಸುತ್ತಿದ್ದರು. ನಾನು ಆಸನಸ್ಥನಾಗಿ ಅವೆಲ್ಲವುಗಳನ್ನು ಬಹು ವಿಚಕ್ಷಣತೆಯಿಂದ ಪರಿಶೀಲಿಸಿ ಗ್ರಂಥ ರೂಪದಲ್ಲಿ ಹೆಣೆಯುತ್ತಿದ್ದೆ. ಮೊಟ್ಟ ಮೊದಲಿಗೆ - ಬ್ರಹ್ಮ ಪುರಾಣ ಬರೆಯುವ ಅಗತ್ಯ ನನಗಿತ್ತು.

27393

ಬ್ರಹ್ಮಸೂತ್ರದಲ್ಲಿ ನಾನು ಹೇಳಿದ ''ಬ್ರಹ್ಮ'' ಮಹರ್ಷಿಗಳ ತಲೆಯನ್ನೂ ಅಲುಗಿಸುವಷ್ಟು ಗೂಢವಾಗಿತ್ತು. ಕೋಟಿಗೊಬ್ಬ ಋಷಿ, ಅಂತಹವರಲ್ಲಿ, ನೂರಕ್ಕೊಬ್ಬ ಮಹರ್ಷಿ! ಈಜು ಬಂದು ಹೊಳೆ ಬಿದ್ದವರು ಕೈ ಸೋತರೂ ಹೇಗೋ ಒದ್ದಾಡಿಯಾದರೂ ದಡ ತಲುಪಬಹುದು, ಆದರೆ ಈಜೇ ಬಾರದ, ಹೊಳೆ ದಾಟಲೇಬೇಕಾದ ಜನಜಾತ್ರೆ ಇನ್ನೂ ನೀರಿಗಿಳಿಯದೆ ದಡದಲ್ಲಿಯೆ ನಿಂತು ಮಿಡುಕುತ್ತಿದೆ. ಅಂತಹ ಜನಕ್ಕೆ ನಾವೆ ಬೇಕು.

ನಾರದರು ನನ್ನನ್ನು ಮೊದಲಿನಿಂದಲೂ ಇದಕ್ಕೆ ಪ್ರೇರೇಪಿಸುತ್ತಿದ್ದರು. ನಾನು ತಪಸ್ಸಿನಲ್ಲಿ ಕಂಡು ಸಂಪರ್ಕ ಬೆಳೆಸಿದ ಅನೇಕ ದೇವತೆಗಳೊಡನೆ - ಮಾನವ ಜಾತಿಯ ಈ ಬಹು ಜನದ ಸಮಸ್ಯೆ ಕುರಿತು ಮಾತನಾಡಿದೆ. ಕೊನೆಯಲ್ಲಿ ದೇವತೆಗಳ ಅಭಿಮತದಿಂದ, ಋಷಿಗಳ ಅನುಭವದಿಂದ ಆಯ್ದ ಘಟನೆಗಳನ್ನು ಮಾನವ ಜನತೆಯ ಮಾರ್ಗದರ್ಶನಕ್ಕಾಗಿ ಇರಿಸುವುದು ಅನಿವಾರ್ಯವಾಯಿತು. ಇದೇ ನನ್ನ ಪುರಾಣ ರಚನೆಯ ಹಿನ್ನೆಲೆ.

ಹಲವು ವರುಷಗಳಿಂದ ನನ್ನ ಎಲ್ಲ ಕಾರ್ಯಗಳನ್ನು ನಿಲ್ಲಿಸಿ ಕೇವಲ ಇದರ ರಚನೆಯಲ್ಲಿಯೇ ತಲೆ ಹಾಕಿದ್ದೇನೆ. ಇದರಿಂದ ಮನಸ್ಸಿಗೆ ನೆಮ್ಮದಿ ದೊರೆತಿದೆ. ಜನಕ್ಕೆ ಉಪಕಾರವೂ ಆಗಿದೆ. ತಪಸ್ವಿಗಳಿಗೆ ತಮ್ಮ ಮನಸ್ಸು, ಅದರ ಇತಿಮಿತಿ ಗೊತ್ತು. ಅವರು ತಮ್ಮ ತೋಳಿನ ಬಲದಿಂದಲೇ ಹೊಳೆ ಈಜಿ ಪಾರಾಗುತ್ತಾರೆ. ಕೈ ಸೋತವ ತಿರುಗುತ್ತಾನೆ. ಸೋತರೂ ಮುಂದುವರಿಯಲು ಹವಣಿಕೆಯುಳ್ಳವ ಹೊಳೆ ಪಾಲಾಗುತ್ತಾನೆ. ನಡುವೆ ನೆರವೆಂದು ಮೊಸಳೆಯ ಬೆನ್ನು ಹಿಡಿದವ ಸಾಯುತ್ತಾನೆ. ಒಂದಲ್ಲ ಸಾವಿರ ಜನ ಅವರ ಶಕ್ತಿಯ ಮೇಲೇ ಸಾಗುತ್ತಾರೆ.

ಮನಸ್ಸು ಕೈಯಲ್ಲಿರುವವರಿಗೆ - ಇದೆಲ್ಲ. ಆದರೆ.... ಜನ!

ಯಾವ ಜನ?

ದೇವರನ್ನು ನಂಬಿದ ಜನ!

ದೇವರೆನ್ನುವವರನ್ನು ನಂಬಿದ್ದರೆ

ನಂಬಿದ್ದರೆ -- !!

ನಂಬಿಕೆಯೆ ಅವರಿಗೆ ನಾವೆ. ನಂಬಿಕೆ ಎಷ್ಟು ಗಟ್ಟಿಯೋ ಅಷ್ಟು ಭದ್ರತೆ ಅವರ ನಾವೆಗೆ ಗಟ್ಟಿಮುಟ್ಟಾದ ನಂಬಿಕೆಯವ ಹೊಳೆ ದಾಟದೆ ನಿಂತಿಲ್ಲ. ನಾವೆ ಹತ್ತಿದರೆ ಹೊಳೆ ದಾಟುತ್ತದೆಯೆ?

'ನಾವು' ನಡೆಯಬೇಕು?

ನಿಜವಾಗಿಯೂ ನಾವು ನಡೆಯಬೇಕು. ನಡೆಸಬೇಕು ಅಂಬಿಗನೊಬ್ಬನಿದ್ದು ಹುಟ್ಟು ಹಾಕಬೇಕು. ಇಲ್ಲವೆ ಹುಟ್ಟಿಗೆ ನಾವೆ ಕೈ ಹಾಕಿ ಕಡೆಯಬೇಕು, ಅಂದರೆ- ನಾವು ಮುಂದೆ ಮುಂದೆ...

ಈ ಹಾದಿಯಲ್ಲಿ ಸಾವಿರ ಭಯ, ಆದರೂ ನಾವು ಗಟ್ಟಿ ಇದ್ದರೆ ನಿರ್ಭಯವೆ -!

ನನ್ನ ಹೃದಯ ಇದೆಲ್ಲವನ್ನು ವಿಚಾರಿಸಿತು. ಹಿಂದೆ ನಡೆದ ಬದುಕನ್ನು ನೋಡಿದೆ. ಸಾವಿರ ಮುಖದ ಬದುಕು. ನನ್ನ ಸಹಕಾರಿಗಳು ಕ'ಂಡ ದೃಶ್ಯಗಳು, ಅವರ ಆಪ್ತರು ಹೇಳಿದ ಸತ್ಯ ಘಟನೆಗಳನ್ನೆಲ್ಲ ಸಂಕಲಿಸಿದೆ. ಅದು ಮಾನವ ಜನಾಂಗದ ಪ್ರಗತಿಯ ಇತಿಹಾಸವೇ ಆಗಿತ್ತು.

ಜನ ಮುಂದುವರಿಯಬೇಕಾದರೆ --

ಒಳ್ಳೆಯ ಬದುಕು ಬಾಳಬೇಕಾದರೆ -

ಅಲ್ಲದ ಬದುಕಿನಿಂದ ದೂರ ಇರಬೇಕಾದರೆ - ಅವರ ಇತಿಹಾಸ ಅವರಿಗೆ ಬೇಕಿತ್ತು. ನನಗೀಗ ಅದರ ರಚನೆಯಿಂದ ಸಂತೋಷವಾಗುತ್ತಿದೆ.

ಹಿಂದಿನ ನಾರದರು ನನಗೆ ಬ್ರಹ್ಮಸೂತ್ರಕ್ಕೆ ಸತ್ವ ಒದಗಿಸಿದ್ದರೆ - ಈಗಿನವರು ಪುರಾಣಕ್ಕೆ ಹೂರಣ ಪೂರೈಸಿದರು. ನಾರದರಿಲ್ಲದೆ ಹೋಗಿದ್ದರೆ ದೇವತೆಗಳ ವ್ಯವಹಾರಗಳನ್ನೆಲ್ಲ ವಿವರಿಸಲು ನನ್ನ ಪ್ರಚಂಡ ಸಹಕಾರಿಗಳಿಗೂ ಅಸಾಧ್ಯವಾಗ ಬಹುದಿತ್ತು. ಅಸುರರ ವಿಚಾರದಲ್ಲಿಯಂತೂ ನಮಗೆ ಸಾಮಾನ್ಯವಾಗಿ ನಾರದರ ಅನುಭವ ಜ್ಞಾನವೆ ದೊಡ್ಡ ಸಹಾಯ. ನಾನು ಬ್ರಹ್ಮ ಪುರಾಣ ಬರೆಯಹತ್ತಿದ್ದೇ ನಾರದರ ಬಲದಿಂದ. ವೇದಗಳನ್ನೆಲ್ಲ ಕಡೆದು ಅಂದಿನ ಆ ನಾರದರು ನಾನು ತೆಗೆದ ನವನೀತಕ್ಕೆ ಬ್ರಹ್ಮ ಎಂದು ಕರೆದು ಜ್ಞಾನದ ಬಾಗಿಲನ್ನು ತೆರೆದರು.

ಇವರೂ ಅಷ್ಟೆ! ಆ ಬ್ರಹ್ಮವನ್ನು ಚತುರ್ಮುಖ ಮಾಡಿದರು. ಜನಮನದಲ್ಲಿ ಬುದ್ಧಿಗೆ ಅಡ್ಡವಾಗಿ ನಿಂತ ಮೊದಲನೆಯ ಪ್ರಶ್ನೆಯನ್ನೇ ಎತ್ತಿಕೊಂಡು ಅದಕ್ಕೆ ಉತ್ತರ ಕೊಡುವ ಸಾಹಸ ಬ್ರಹ್ಮ ಪುರಾಣದಲ್ಲಿದೆ.

ಒಮ್ಮೆ ನಾರದರು ಲೋಕದ ಸಾಮಾನ್ಯ ಪ್ರಜೆಯಾಗಿ ತಮ್ಮ ಬೇಕು ಬೇಡ, ಸಹಾಯ ಭಯ, ಸಂತೋಷಗಳನ್ನು ನನ್ನ ಮುಂದೆ ಪ್ರದರ್ಶಿಸಿದರು. ಅದೇ ಬ್ರಹ್ಮ ಪುರಾಣವಾಯಿತು.

ಲೋಕ ಹುಟ್ಟಿತ್ತು.

ಹೇಗೆ - ? ಅದರ ತಂದೆ - ತಾಯಿ?

ಲೋಕದ ತಂದೆ - ಬ್ರಹ್ಮ.

ಇದನ್ನು ಹೆತ್ತನೆಂದ ಬಳಿಕ ಅವನಿಗೆ ಹೆಂಡತಿ, ಹೀಗೆಯೆ ಕತೆ ಸಾಗಿತ್ತು.

ಕತೆ ಎಂದರೆ ಊಹಾ ವಿಲಾಸವಲ್ಲ; ಬ್ರಹ್ಮ ದಿನಚರಿ, ವಾರ್ಷಿಕ ವರದಿ. ಜೀವನ ಚರಿತ್ರೆ. ನನ್ನ ಕೃತಿಯ ಬಗ್ಗೆ ನನಗೆ ಅಮಿತ ಸಮಾಧಾನವಿತ್ತು. ಬರಿ ಸಮಾಧಾನ ಮಾತ್ರವಲ್ಲ. ಲೋಕಕ್ಕಾಗಿ ನಾನು ಯಾವ ಕೆಲಸ ಮಾಡಬೇಕಿತ್ತು ಅದು ಪ್ರಗತಿ ಪರವಾಗಿಯೇ ನಡೆದಿತ್ತು.

ನನ್ನ ಪರಮ ಪಿತಾಮಹರಾದ ವಸಿಷ್ಠರು ಕಾಡಿನಲ್ಲಿ ಎಲೆಮನೆ ಕಟ್ಟಿಕೊಂಡು ದೇವಸತ್ವವನ್ನು ಹೃದಯದಲ್ಲಿ ಅವತರಿಸಿಕೊಂಡು ಬಾಳಿದರು. ಹಾಗೆ ಬಾಳಲು ಬಂದವರನ್ನು ಬದುಕಿಸಿದರು. ಆದರೆ ಕಾಲ ಬದಲಾಯಿತು. ಹೃದಯ ಯಜ್ಞದಿಂದ ಮನುಷ್ಯನ ಮುಖ ಬೇರೆ ಕಡೆಗೆ ತಿರುಗಿತು. ಇಂದಿನ ಜನತೆಯ ಮನೋರಂಗಕ್ಕೆ - ಅನುಕೂಲವಾದ ಈ ಇತಿಹಾಸದ ಅವಶ್ಯಕತೆಯಾಯಿತು.

ಗುರುಕುಲಗಳಲ್ಲಿ ಬ್ರಹ್ಮಸೂತ್ರ ಪ್ರತಿಷ್ಠಿತವಾದಂತೆ ಜನಮನದಲ್ಲಿ ಪುರಾಣಗಳು ಪ್ರಸಿದ್ಧಿ ಪಡೆದವು. ಅಲ್ಲದೆ ನಮ್ಮ ಆಶ್ರಮದಿಂದ ಹಲವಾರು ಜನರು ಪುರಾಣ ವಾಚನಕ್ಕಾಗಿಯೇ ನಿಯುಕ್ತರಾಗಿದ್ದರು.

ಜನತೆಯ ಹೃದಯವನ್ನು ಗೆಲ್ಲುವಲ್ಲಿ ಮಹರ್ಷಿಗಳ ತಪೋಬಲಕ್ಕಿಂತಲೂ ಪುರಾಣ ವಾಚನವು ಪ್ರಚಂಡ ಯಶಸ್ಸು ಗಳಿಸಿದೆ.

ಪುರಾಣ ರಚನೆಯಲ್ಲಿ ವರುಷಗಳು ನಿಮಿಷದಂತೆ ಉರುಳಿದವು. ಈ ಅವಧಿಯಲ್ಲಿ ಶಮ್ಯಾಶ್ರಮ ಭಾರತದ ಮಹಾ ನಗರಕ್ಕಿಂತ ಜನ ನಿಬಿಡವಾಯಿತು. ರಾಜರು ನಿತ್ಯವೂ ತಪೋವನದ ಪ್ರಾಂತ ಭೂಮಿಯಲ್ಲಿ ರಥಗಳನ್ನು ನಿಲ್ಲಿಸಿ ಆಶ್ರಮದ ಸಂದೇಶ, ಮಾರ್ಗ ದರ್ಶನಕ್ಕಾಗಿ ಕಾದಿರುತ್ತಿದ್ದರು.

ನನಗೆ ಆಶ್ರಮವು ಜನ ನಿಬಿಡವೆನ್ನಿಸಿ ಶಾಂತಿ ಬೇಕಿತ್ತು. ಇತಿಹಾಸ ರಚನೆಯಲ್ಲಿ ನನ್ನ ಒಳಗೊಳಗೆ ಕುದಿಯುತ್ತಿರುವ ಕಾರ್ಯವೊಂದು ನನ್ನನ್ನು ಎಚ್ಚರಗೊಳಿಸುತ್ತಲೇ ಇತ್ತು. ಬಹಳ ವರುಷಗಳ ಹಿಂದೆ ನಾನು ಹಸ್ತಿನಾವತಿಯಲ್ಲಿ ನಿಯೋಗ ವಿಧಿ ಜರುಗಿಸಿದ ಸಂಗತಿ ನನ್ನ ಜ್ಞಾಪಕಕ್ಕೆ ಬಂತು.

ನಿಯೋಗದಲ್ಲಿ ನನ್ನ ಉದ್ದೇಶವೇನಿತ್ತು? ದೇವತೆಗಳ ಸತ್ವವನ್ನು ಅಂಗೀಕರಿಸಿ ಬದುಕಲು ಶಕ್ತರಾದ ಪುತ್ರ ನಿರ್ಮಾಣ ನನ್ನ ಉದ್ದೇಶವಾಗಿತ್ತು. ಆದರೆ ಪಾತ್ರದ ದೋಷದಿಂದ ಎರಡು ನಿಯೋಗ ವಿಧಿಗಳು ವಿಫಲಗೊಂಡವು. ಮೂರನೆಯದು?

ಅದೊಂದು ಕತೆಯೇ!

ಪಾತ್ರ ಪ್ರಶಸ್ತವಿತ್ತು. ಆದರೆ - ಅದಕ್ಕೆ ತನ್ನ ಜೀವನದ ಬಗ್ಗೆ ಬಹುವಾದ ಅಲ್ಪ ಕಲ್ಪನೆಯಿತ್ತು. ಅಂತೆಯೆ ಅದರ ಸಂತಾನ ಯೋಗ್ಯವಾಯಿತು. ಗುಣಶಾಲಿಯಾಯಿತು. ಆದರೆ ಗೌರವಯುತವಾಗಲಿಲ್ಲ. ನಾನು ಹಸ್ತಿನಾವತಿಯ ಕಡೆಗೆ ನೋಡಿದಾಗ ಈ ಮಾತು ಸ್ಪಷ್ಟವಾಗಿ ಕಾಣುತ್ತದೆ.

ಕುರುಡನಾದರೂ ರಾಜಸತ್ವವಿರುವ ಧೃತರಾಷ್ಟ್ರ!

ರೋಗಿಯಾದರೂ ಜನಪ್ರಿಯನಾದ, ಸತ್ವಶಾಲಿಯಾದ ಪಾಂಡು.

ಗುಣ, ಶೀಲ, ಸಹೃದಯತೆಗಳಿದ್ದರೂ ಕುಲದ ಪ್ರೌಢಿಮೆ ಇಲ್ಲದ ವಿದುರ!

ನಡೆಯಲು ಬಾರದ ಕುರುಡನನ್ನು ಸುತ್ತಲಿನ ಜನ ತಾವು ನಡೆಯಲು ಅವನ ಸುತ್ತು ಬೆಳೆದು ಅವನನ್ನೂ ನಡೆಸುತ್ತಾರೆ. ಇತರರ ಸತ್ವವನ್ನು ತಮ್ಮ ಬೆಳೆಗೆ ಉಪಯೋಗಿಸುವವರು ಧೃತರಾಷ್ಟ್ರನ ಸುತ್ತ ತುಂಬ.

ಪಾಂಡು! ಈತ ರೋಗಿ ಎಂಬ ಕನಿಕರದಿಂದ ಇವನ ಸುತ್ತು ಜನ ಇರುವರು. ಇವನ ಒಂದು ಒಳ್ಳೆಯದು ತಮ್ಮ ಬಾಳಿನ ದಾರಿಗೆ ಬುತ್ತಿಯಾಗುವುದು ಎಂದು.

ವಿದುರ! ಬರಿ ಒಳ್ಳೆಯದೊಂದೆ ಲೋಕದಲ್ಲಿ ಬದುಕಲು ಅರ್ಹವಾದ ಗುಣವಲ್ಲ. ಒಳ್ಳೆಯದು ಬಲಿಷ್ಠವಾಗಿರದಿದ್ದರೆ - ಬೆಳೆಯುವುದೂ ಇಲ್ಲ. ವಿದುರ ಅಶಕ್ತ, ಒಳ್ಳೆಯವ. ಆದ್ದರಿಂದ ಬಲಿಶಾಲಿಯಾದುದನ್ನು ನಂಬಿಕೊಂಡು ಆತ ಬದುಕಬೇಕು.

ಈ ಸಂತಾನದಿಂದ ನನ್ನ ಇಚ್ಛೆ ಈಡೇರಲಿಲ್ಲ. ದೇವತೆಗಳಲ್ಲಿ - ಭೂಮಿಯ ಜನರಲ್ಲಿ ಸಹಜೀವನ ಅಗತ್ಯ. ಆದರೆ ಅದನ್ನು ನಿರ್ವಹಿಸುವ ಸಂತಾನ ಬೇಕು.

ನನ್ನ ಪ್ರಯತ್ನ ಅಂಶತಃ ವಿಫಲವಾಗಿತ್ತು.

ಮುಂದೆ.....?

ಈ ವಿಚಾರದಲ್ಲಿ ನಾನು ಮತ್ತೆ ಶಾಂತಿಯ ಹಸಿವೆಯಿಂದ ಹಿಮಗಿರಿ ಸೇರಿದ್ದೆ.

ಒಂದು ದಿನ - ! ನಾನು ತಪಸ್ಸಿನಿಂದ ಇನ್ನು ಆಶ್ರಮಕ್ಕೆ ಹೊರಡುವವ. ನಾನಿರುವ ಗುಡಿಸಲಿನ ಹೊರಗೆ ಯಾರೋ ಸುಳಿದ ಹಾಗಾಯಿತು. ಎದ್ದು ಹೊರಗೆ ಬಂದು ನೋಡಿದೆ.

ಯಾರೋ ಹೆಣ್ಣು ಮಗಳು ನನ್ನ ಕಡೆಗೇ ಬರುತ್ತಿರುವುದು ಕಂಡಿತು. ನಾನು ಸ್ವಲ್ಪ ಆಶ್ಚರ್ಯಪಟ್ಟೆ. ಯಾರೂ ಇಲ್ಲದ ಈ ಕಾಡಿನಲ್ಲಿ ಅದೂ ಹೆಂಗಸು?

ಹೇಗೆ ಬಂದಿರಬೇಕು? ಯಾರಿರಬಹುದು? ನಾನು ಯೋಚಿಸುವಾಗಲೆ ಅವಳು ಗುಡಿಸಲಿನ ಬಾಗಿಲಿಗೆ ಬಂದಳು. ನಾನೊಮ್ಮೆ ಶಾಂತವಾಗಿ ಅವಳನ್ನು ನೋಡಿದೆ. ಯಾರೋ ದಿವ್ಯ ವೇಷದ ಹೆಂಗಸು!

ಅದ್ಭುತ ರೂಪ! ಆಕರ್ಷಕ ಲಾವಣ್ಯ!

ಅವಳು ನೇರವಾಗಿ ನನ್ನ ಗುಡಿಸಲಿನ ಮುಂದೆ ಬಂದು ನಿಂತಳು. ನನಗೆ ಅವಳನ್ನು ಮಾತನಾಡಿಸದೆ ವಿಧಿ ಉಳಿಯಲಿಲ್ಲ.

''ಯಾರು ನೀನು? ''

''ನಾನು ಘೃತಾಚಿ.....''

ನನಗೆ ಅವಳ ಹೆಸರಿನಿಂದ ಪೂರ್ವಾಪರ ತಿಳಿಯಲಿಲ್ಲ. ಕುತೂಹಲಗೊಂಡು ಕೇಳಿದೆ.

''ಈಗ ಎಲ್ಲಿಂದ ಬಂದಿ?''

''ಸ್ವರ್ಗದಿಂದ..... ''

''ಏನು ಶಾಪದಿಂದಲೋ ?''

ನನಗೇಕೋ ಸ್ವರ್ಗದಿಂದ ಬರುವವರ ವಿಷಯದಲ್ಲಿ ಹಾಗೆಯೇ ಶಂಕೆ. ಏಕೆಂದರೆ ನೆಲದಿಂದ ಸ್ವರ್ಗಕ್ಕೆ ಹೋದವರಲ್ಲಿಯೂ ಕೆಲವರು ಇದೇ ಕಾರಣದಿಂದ ಭೂಮಿಗೆ ಮರಳಿದ್ದರು. ಸ್ವರ್ಗದಲ್ಲಿಯೆ ಬೆಳೆದು ಬಾಳಿದ ಹಲವಾರು ಜನ ಭೂಮಿಗೆಂದು ಇದೇ ಸಂದರ್ಭದಲ್ಲಿಯೆ ಬಂದಿದ್ದರು. ನಾನು ಅವಳ ಲಾವಣ್ಯ,ಯೌವನಗಳನ್ನು ಕಂಡು ಸ್ವರ್ಗದಲ್ಲಿ ಏನೋ ಪ್ರಮಾದ ಮಾಡಿ ಬಂದಿರಬೇಕೆನ್ನಿಸಿತು.

''ಇಲ್ಲ ಯಾವ ಶಾಪದಿಂದಲೂ ನಾನು ಸ್ವರ್ಗ ಇಳಿದು ಬರಲಿಲ್ಲ. ನನಗೆ ಭೂಮಿಗೆ ಬರಬೇಕಿತ್ತು. ''

''ನಿಜವಾಗಿಯೂ ಸಂತೋಷ ಸಂಗತಿ. ಯಾವ ದೇವತೆಗಳ ಕಾರ್ಯ ಭಾರವನ್ನು ಹೊತ್ತು ಬಂದಿದ್ದೀಯಾ ? ನೀನು ಸ್ವರ್ಗದಲ್ಲಿ ಯಾರು ? ನಿನ್ನ ಬಗ್ಗೆ ಸರಿಯಾದ ವಿವರಣೆ ಕೊಡು.''

''ನಾನೊಬ್ಬಳು ಅಪ್ಸರೆ. ನಾನು ಮಹಾದೇವನ ಹತ್ತಿರ ಹೋಗಿ ಬಿನ್ನವಿಸಿದೆ. ಸ್ವಾಮೀ, ನನಗೆ ಸಂತಾನದ ಅಪೇಕ್ಷೆಯಾಗಿದೆ ಏನು ಮಾಡಲಿ ? ''

ನನಗೆ ಅಪ್ಸರೆಯರ ಪೂರ್ವಾಪರ ಗೊತ್ತು. ಅವರು ರೂಪ ಯೌವನ ಇದ್ದೂ ಐಶ್ವರ್ಯ ಸಮೆಯದಷ್ಟಿದ್ದರೂ ಕೇವಲ ಅವುಗಳಿಂದ ದೇವತೆಗಳ ಮನೋರಂಜನೆ ಮಾಡಬೇಕು. ಅವರ

ಭೋಗ ವಸ್ತುವಾಗಿ ಬದುಕಬೇಕು. ಸ್ವರ್ಗದ ಶ್ರೀಮಂತಿಕೆಯಲ್ಲಿ ಈ ಜನಾಂಗ ಈ ರೀತಿಯೇ ಬದುಕಿತು. ಇಷ್ಟೂ ಸಾಲದೆ ಒಮ್ಮೊಮ್ಮೆ ಭೂಮಿಯಲ್ಲಿ ಯಾವನೋ ಋಷಿ ಸಿದ್ಧಿಗೆ ತಪಸ್ಸು ತೊಡಗಿದ್ದಾನೆ. ಅವನನ್ನು ಮಾತ್ಸರ್ಯದಿಂದಲೋ, ಕಾರ್ಪಣ್ಯದಿಂದಲೊ ಹಾದಿ ತಪ್ಪಿಸುವ ಚಪಲ ಕೆಲ ದೇವತೆಗಳಿಗೆ. ಆಗ ಅವರ ಉಪಕರಣವಾಗಬೇಕಿತ್ತು ಈ ಅಪ್ಸರೆಯರು!

ಇಲ್ಲ, ಭೂಮಿಯ ಮೇಲಿನ ಒಬ್ಬ ರಾಜ ಧನುಜ ತಪಸ್ಸಿನಲ್ಲಿ ತೊಡಗಿದ್ದಾರೆ. ಅವರಿಗೆ ಸ್ವರ್ಗದ ಆಧಿಪತ್ಯವೋ ಬಲವೋ ಬೇಕಾಗಿದೆ. ಸಂಬಂಧಪಟ್ಟ ದೇವತೆಗಳು ಅದನ್ನು ಕೊಡುವ ಸಿದ್ಧತೆಯಲ್ಲಿಲ್ಲ. ತಪಸ್ಸು ಪೂರ್ತಿಗೊಂಡರೆ ಸ್ವರ್ಗ ಅದನ್ನು ಕೊಡಲು ಘಟನಾತ್ಮಕವಾಗಿ ಬದ್ಧವಾಗಿರುತ್ತದೆ. ಈ ಸಮಯದಲ್ಲಿ ತಪಸ್ಸನ್ನು ಕೆಡಿಸಲು. ಇಲ್ಲವೆ ಹಾದಿ ತಪ್ಪಿಸಲು ಇವರನ್ನು ಬಳಸಲಾಗುತ್ತಿತ್ತು. ನನಗೆ ಆತುರವಾಯಿತು. ಅಪ್ಸರೆಯರು-- ಹಾಗು ಸಂತಾನ- ಒಂದಕ್ಕೊಂದು ವಿರೋಧ. ಕಾಮಿಗಳೂ ಸಂತಾನವೆಂದರೆ ಭಯಪಡುತ್ತಾರೆ. ಇವಳಿಗೆ ಸಂತಾನ ಕಾಮನೆ - ನಾನು ಆತುರಗೊಂಡು ಕೇಳಿದೆ-

''ಮಹಾದೇವರು ಏನೆಂದು ಉತ್ತರಿಸಿದರು?''

''ಅವರಿಗೆ ನನ್ನ ಬಗ್ಗೆ ಸಾಕಷ್ಟು ಸಹಾನುಭೂತಿ ಇದೆ. ಆದರೆ ಸ್ವರ್ಗದ ಘಟನೆಯನ್ನು ಅವರು ಮೀರಲಾರರು. ಸ್ವರ್ಗದಲ್ಲಿ ನಮ್ಮ ವರ್ಗಕ್ಕೆ ಸಂತಾನದ ಅನುಮತಿ ಇಲ್ಲ. ಅದು ಘಟನೆಗೆ ವಿರೋಧ, ಮಹಾದೇವರು ಈ ನಿಯಮಗಳನ್ನು ಮುರಿಯಲು ಮನಸ್ಸಿಲ್ಲದೆ ಹೇಳಿದರು.

'ಸ್ವರ್ಗದಲ್ಲಿ ನಿನಗೆ ಸಂತಾನ ಸಾಧ್ಯವಿಲ್ಲ.'

''ನನಗೆ ಆ ಮಾತೂ ಗೊತ್ತೇ ಇತ್ತು. ಅಲ್ಲದೆ ನಾನು ಘಟನೆಗೆ ವಿರೋಧಿ ಎಂಬ ಕಾರಣದಿಂದ ಮಾತ್ರ ಸ್ವರ್ಗದ ಸಂತಾನ ನಿರಾಕರಿಸಲಿಲ್ಲ. ನನಗೆ ಸ್ವರ್ಗದ ಬದುಕಿಗಿಂತ ಪುರೋಗಾಮಿ ಜೀವನವನ್ನು ನಡೆಸುವ ಮಗ ಬೇಕಾಗಿತ್ತು.

''ನಾನು ಮಹಾದೇವರನ್ನು ಮತ್ತೆ ಕಾಡಿದೆ. ಅವರು ನನ್ನನ್ನು ನಿಮ್ಮ ಕಡೆಗೆ ಕಳಿಸಿದ್ದಾರೆ.''

''ನಾನು ಒಮ್ಮೆಲೇ ಚಕಿತನಾದೆ. ಈ ಆಕಸ್ಮಿಕದಿಂದ ಯೋಚನೆಗೊಳಗಾದೆ. ನನ್ನ ತಲೆಯಲ್ಲಿ ಮತ್ತೆ ಶಂಕೆ ಬಂತು. ಸ್ವರ್ಗದಲ್ಲಿ ನನ್ನ ಮೇಲೂ ಯಾರಿಗಾದರೂ ವಕ್ರ ದೃಷ್ಟಿ ಇದೆಯೆ? ನಾನು ಸುದೀರ್ಘವಾಗಿ ವಿಚಾರಿಸಿದೆ. ನನಗೆ ಅಂತಹ ಯಾವ ದೇವತಾ ಪ್ರಯತ್ನವೂ ಕಾಣಲಿಲ್ಲ. ಅಲ್ಲದೆ ಅನೇಕ ದೇವತೆಗಳು ನನ್ನಿಂದ ಸಹಾಯವನ್ನೇ ಪಡೆದಿದ್ದರು. ತಮ್ಮ ಬಹಳ ಕೆಲಸಗಳನ್ನು ಅವರು ನನ್ನಿಂದ ಪೂರೈಸಿಕೊಂಡಿದ್ದರು.

ಆದರೂ ಕೆಲ ಸಂಶಯಗಳು ನನ್ನನ್ನು ಮುತ್ತಿದವು. ನಾನು ನಿರ್ದಾಕ್ಷಿಣ್ಯವಾಗಿ ಅವಳನ್ನು ಕೇಳಿದೆ.

''ಘೃತಾಚಿ, ಭೂಮಿಯವರನ್ನು ದಾರಿ ತಪ್ಪಿಸಲು ದೇವತೆಗಳು ನಿನ್ನನ್ನು ಬಳಸುತ್ತಾರೆ. ನೀನು ಈಗ ಹೇಳಿದ ಮಾತನ್ನು ನಾನು ನಂಬುವುದು ಹೇಗೆ? ''

ಅವಳು ಶಾಂತಳಾಗಿ ಹೇಳಿದಳು.

''ಮುನಿವರರು - ದೇವಸತ್ವದ ಸಂತಾನಕ್ಕಾಗಿ ಈಗ ಮೂರು ಸಲ ವಿಫಲರಾಗಿದ್ದಾರೆ. ಆ ಸಂಗತಿಯೊಡನೆ ಮಹಾದೇವರು ನನಗೆ ತಮ್ಮಲ್ಲಿಗೇ ಹೋಗಲು ಆದೇಶಿಸಿದರು. ಅಲ್ಲದೆ ತಮ್ಮ ಈ ತಪಸ್ಸಿನಲ್ಲಿ ಮತ್ತೆ ದೇವಸಂತಾನದ ಯೋಚನೆಯೆ ಇದೆ ಎಂದೂ ಅವರು ಹೇಳಿ ನೀನು ವ್ಯಾಸರಲ್ಲಿ ಹೋಗು, ಅವರು ಮಹಾ ನಗರಗಳಲ್ಲಿ, ತಪೋವನಗಳಲ್ಲಿ, ಆಶ್ರಮಪದಗಳಲ್ಲಿ ಪುರಾಣ ವಾಚನ ನಡೆಸುತ್ತಾರೆ. ನಿನ್ನ ಇಷ್ಟಾರ್ಥ ಸಿದ್ಧಿಸುತ್ತದೆ ಅಲ್ಲದೆ ಬಹು ಕಾಲದಿಂದ ಬಯಸುವ ಅವರ ಯತ್ನವೂ ಫಲಿಸುವುದು............''

ನನಗೆ ಅವಳ ಒಂದೊಂದು ಮಾತೂ ನನ್ನ ಹೃದಯಕ್ಕೆ ಸಮೀಪದವೆನ್ನಿಸುತ್ತಿತ್ತು. ಒಂದು ಕ್ಷಣ ನಾನು ಗಂಭೀರನಾಗಿ ನನ್ನ ತಪಸ್ಸಿನ ಕಾರಣ ಶಕ್ತಿಯನ್ನು, ಮನೋವಿಸ್ತಾರವನ್ನೂ ಚಿಂತಿಸಿದೆ. ಅದರಲ್ಲಿ ನನ್ನ ಸಂತಾನ ಕಾಮನೆಯ ಸ್ಪಷ್ಟ ಹೆಜ್ಜೆಗಳನ್ನು ನಾನು ಗುರುತಿಸಿದೆ! ನನ್ನ ಭಾಗ್ಯ ದೈವದಿಂದ ಅನುಮತವಾಗಿ ಅವಳು ಬಂದುದಕ್ಕೆ ನನಗೆ ಹಿಗ್ಗೆನ್ನಿಸಿತ್ತು.

ಆಗ ಮನಸ್ಸು ಪೂರ್ಣ ವಿರಕ್ತವಾಗಿತ್ತು. ಸಂತಾನವು ಅನುರಾಗದ ರಂಗಭೂಮಿ, ನಾನು ಘೃತಾಚಿಗೆ ಹೇಳಿದೆ.

''ಒಂದು ವಾರ ನೀನು ಇಲ್ಲಿ ತಂಗಬೇಕು,''



''ತಮ್ಮ ಆದೇಶದಂತೆಯೆ ಆಗಲಿ.''

ಘೃತಾಚಿ ಅದೇ ಎಲೆಮನೆಯಲ್ಲಿದ್ದಳು. ವೈರಾಗ್ಯದ ಸೀಮೆಯಿಂದ ಮನಸ್ಸನ್ನು ಅನುರಾಗದ ಉದ್ಯಾನಕ್ಕೆ ತಂದೆ. ಘೃತಾಚಿ ಸಂತಾನ ಕಾಮನೆಯಿಂದ ಸಿದ್ಧಳಾಗಿ ನನ್ನನ್ನು ಸ್ವಾಗತಿಸಿದಳು.

ಮುಂದೆ ಯಾವುದೋ ಒಂದು ಪೂರ್ಣಿಮೆಯ ದಿನ ನನಗೆ ಶಮ್ಯಾಶ್ರಮದ ಕರೆ ಬಂತು. ಹೊರಟು ಹೋದೆ. ಘೃತಾಚಿ ಏಕಾಕಿಯಾಗಿ ತನ್ನಲ್ಲಿ ಬೆಳೆಯುತ್ತಿರುವ ಕಂದನನ್ನು ನಂಬಿಕೊಂಡು ಆ ಮೈ ಕೊರೆವ ಚಳಿಯಲ್ಲಿ ಶರತ್ಕಾಲದ ಇರುಳುಗಳನ್ನು ಅಲ್ಪ ವಸ್ತ್ರಗಳಲ್ಲಿ ದರ್ಭೆಯ ಶಯ್ಯೆಯಲ್ಲಿ ಕಳೆದಳು. ಅವಳ ಇಷ್ಟಾರ್ಥ ಸಿದ್ಧಿಸಿತ್ತು. ಪತಿ ಎಂದು ನನ್ನನ್ನು ಬಹಳ ವ್ಯಾಮೋಹದಿಂದ ಕಂಡು ನನ್ನ ವಿರಹದಲ್ಲಿ ಕೊರಗುವ ಮುಗ್ಧ ಪ್ರೇಮದವಳೂ ಅವಳಾಗಿರಲಿಲ್ಲ. ನನ್ನ ವ್ಯಕ್ತಿತ್ವ, ಕಾರ್ಯ ಬಾಹುಲ್ಯಗಳನ್ನು ಆಕೆ ಬಲ್ಲಳು.

ನನಗೂ ಅಷ್ಟೆ. ಅವಳ ರೂಪ, ಯೌವನಗಳು ಆಕರ್ಷಕವಾಗಿರಲಿಲ್ಲ. ನನ್ನನ್ನು ಆಕರ್ಷಿಸಿದ್ದು ಅವಳ ಸಂಕಲ್ಪ. ನನ್ನ ಸಂಕಲ್ಪಕ್ಕಾಗಿಯೆ ಅವಳು ನಿಯುಕ್ತಳಾಗಿದ್ದಳು. ಅವಳೊಡನೆ

ಕಳೆದ ನನ್ನ ದಿನಗಳಲ್ಲಿ ಹಸ್ತಿನಾವತಿಯ ನಿಯೋಗ ದಿನಗಳನ್ನು ನಾನು ಸ್ಮರಿಸಿದೆ. ಅದಕ್ಕೂ ಇದಕ್ಕೂ ಎಲ್ಲಿಯ ಸಂಬಂಧ ?

ಅಲ್ಲಿ ಏನಿತ್ತು?

ಸಂತಾನ ಕಾಮನೆ ನನಗಿರಲಿಲ್ಲ.

ಶಯ್ಯಾಗಾರದಲ್ಲಿ ನನ್ನೊಡನೆ ವಿಹರಿಸುವ

ಬಾಲೆಯರಿಗಿತ್ತೆ -- ?

ಇತ್ತು....... ಆದರೆ.......

ನನ್ನಿಂದಲೇ ಸಂತಾನ ಬೇಕೆಂದು ಅವರಿಗಿರಲಿಲ್ಲ. ಅದು ಅವರಿಗೆ ಬಲವಂತ ಮಾಘ ಸ್ನಾನವಾಗಿತ್ತು.

ಹಾಗಾದರೆ ಸಂತಾನ ಬೇಕಿತ್ತು. ಯಾರಿಗೆ --- ?

ನನ್ನ ತಾಯಿಗೆ --- ?

ಸಂತಾನ ಧರಿಸುವವರಿಗೆ ಇಲ್ಲದಾಗಿತ್ತು!

ಸಂತಾನಧರಿಸುವವರಿಗೆ ಒಲ್ಲದಾಗಿತ್ತು.

ಗರ್ಭದಾನ ಮಾಡುವವ ಉದಾಸೀನನಾಗಿದ್ದ!

ಅದರ ಫಲ -- ಹಾಗಾಯಿತು -- ಅದು ಮುಂದೆ ತನ್ನ ಆಟ ಆಡುತ್ತಿದೆ. ಆದರೆ ಈಗ...

ನಾನು ತಪಸ್ಸಿನಲ್ಲಿ ಮಹಾ ಸಂತಾನವನ್ನೇ ಗುರಿಯಾಗಿ ತಪಿಸಿದೆ. ನಾನು ತಪಸ್ಸು ಮಾಡಿದ ಆ ಎಲೆ ಮನೆ ಕಟ್ಟಿದ್ದು ಎಲ್ಲಿ ? ಅದಕ್ಕೆ ಒಂದು ಅದ್ಭುತವಾದ ಹಿನ್ನೆಲೆ ಇದೆ. ನನ್ನ ನೆಚ್ಚಿನ ಮಹಾ ದೇವರು ಇಲ್ಲಿ, ಈ ಸ್ಥಳದಲ್ಲಿಯೆ ಸ್ಕಂದನಿಗೆ ಜನ್ಮವಿತ್ತರು. ಅಂತೆಯೆ ನಾನು ಏನೋ ತಪಸ್ಸಿಗೆ ಬಂದು ಸಂತಾನ ಬಯಸಿ ಅದನ್ನು ದೃಢಪಡಿಸಿಕೊಂಡೆ.

ಇಂದು ಈ ಸಂತಾನ ಸಂದರ್ಭದಲ್ಲಿ ಏನಿದೆ --- ?

ಸ್ವರ್ಗದ ಈ ಕ್ಷೇತ್ರ ಸಂತಾನ ಕಾಮನೆಯಿಂದ ದೈವಾನುಗ್ರಹ ಪಡೆದು ಮಹಾದೇವನ ಮಾರ್ಗದರ್ಶನದಲ್ಲಿ ತನ್ನಲ್ಲಿ ಬಂದಿದೆ.--

ತಾನು ಸಂತಾನ ಸಂಕಲ್ಪದಿಂದ ಸಿದ್ಧನಿದ್ದೆ!

ಶಮ್ಯಾಶ್ರಮದಲ್ಲಿ ಒಂದು ವರುಷ ಕಳೆದು ವಿಷ್ಣು ಪುರಾಣ ಮುಗಿಸಿದೆ. ವಿಷ್ಣು ಪುರಾಣವನ್ನು ಈಗಾಗಲೆ ಅನೇಕ ಕಡೆಗೆ ನಮ್ಮ ಆಶ್ರಮವಾಸಿಗಳು ಹೇಳಿಕೊಳ್ಳುತ್ತಿದ್ದರೂ

ಅದರ ಮುಕ್ತಾಯವನ್ನು ನಾನು ಕ್ರಮಗೊಳಿಸಿದ್ದಿಲ್ಲ. ಈಗ ಆರು ಪುರಾಣಗಳ ರಚನೆಯಾಗಿತ್ತು. ನಾನು ವಿಷ್ಣುಪುರಾಣವನ್ನು ಮುಕ್ತಾಯಗೊಳಿಸಿ ವಾರಣಾಸಿಯ ರಾಜನಾದ ಸಂಪ್ಲವ ನಡೆಸಿದ ಮಹಾ ಯಾಗದಲ್ಲಿ ಅದರ ಬಿಡುಗಡೆಮಾಡಿದೆ.

ಆಗಲೆ ಅದನ್ನು ಕೇಳಿ ಆನಂದಿಸಿದ ಋಷಿಗಳು, ರಾಜರು, ತಪಸ್ವಿಗಳು ನನ್ನ ಬಗ್ಗೆ ಬಹುವಾದ ಆದರ ತಾಳಿದರು. ನಾನು ವಾರಣಾಸಿಯಲ್ಲಿಯ ಈ ಸಮಾರಂಭ ತೀರಿಸಿಕೊಂಡು ತಿರುಗಿ ಹೈಮಾಚಲಕ್ಕೆ ಬರುವಾಗ ಅದೆಷ್ಟೋ ದಿನ ಕಳೆದಿದ್ದವು.

ಘೃತಾಚಿ ನನಗಾಗಿ ಕಾದಿದ್ದಳು. ಮುದ್ದು ಮಗುವನ್ನು ನನ್ನ ಕೈಗಿತ್ತು ಹೇಳಿದಳು.

''ನನ್ನ ಕೆಲಸ ಮುಗಿದಿದೆ, ಇದು ನಿಮ್ಮ ಸಂತಾನ, ನೀವು ಬೇಡಿದ್ದು ಮಹಾದೇವರಲ್ಲಿ. ನಾನು ಬೆಳೆಸುವೆನೆಂದುಕೊಂಡು ಪಡೆದುಕೊಂಡಿದ್ದೀರಿ. ಇದನ್ನು ನಿಮಗೆ ಒಪ್ಪಿಸಿದೆ, ನಾನಿನ್ನು ಹೊರಡುವೆ........''

ಘೃತಾಚಿ ಹೊರಟು ಹೋದಳು, ಲೋಕದ ಹೆಣ್ಣಿನಂತೆ, ಅವಳಿಗೆ ವಿರಹದ ದುಃಖ ಮಿಲನದ ಆನಂದಗಳಿರಲಿಲ್ಲ. ಅವಳು ಆಪೋದೇವತೆಗಳ ಅನುಗ್ರಹ ಶಕ್ತಿ ಇದ್ದ ದೇವ ಅಪ್ಸರೆ......!

ನಾನು ಮಗುವನ್ನು ಎತ್ತಿಕೊಂಡು ಶಮ್ಯಾಶ್ರಮಕ್ಕೆ ಬಂದೆ. ನನ್ನ ಆಶ್ರಮ ವಾಸಿಗಳಿಗೆಲ್ಲ ಹೇಳಿದೆ......

''ಇದು ವ್ಯಾಸ ಸಂತಾನ!''

ನನ್ನ ಸಹಕಾರಿಗಳ ಆಶ್ಚರ್ಯಕ್ಕೆ, ಆನಂದಕ್ಕೆ ಪಾರವಿಲ್ಲ. ಆ ಪುಟ್ಟ ಮಗು ಪಳಪಳನೆ ಪಂಡಿತವಕ್ಕಿಯಂತೆ ಮಾತನಾಡುವುದನ್ನು ಕಂಡು ಎಲ್ಲರೂ ಶುಕ! ಎಂದರು. 27393

ನಾಳೆ ಹೆಸರಾಗಲಿರುವ ಹುಡುಗನಿಗೆ ಇಂದು ಇಡುವ ಹೆಸರಿನ ತೊಡಕೇಕೆ ಎಂದು ನಾನು ಸುಮ್ಮನಿದ್ದೆ.

ಎಲ್ಲರೂ ಕರೆದ ಶುಕ - ಅವನ ಹೆಸರಾಯಿತು. ವಿಶ್ವಾವಸು ಸ್ಮೃತಿ ಇಬ್ಬರೂ ಅವನನ್ನು ಕಪಿಲಾಶ್ರಮಕ್ಕೆ ಓದಿಗಾಗಿ ಕಳಿಸಿದರು.

# ಲೋಕದ ಏಕೈಕ ವಿಭೂತಿ

ಮತ್ತೆ ಮೂವತ್ತು ವರುಷ ಕಳೆದವು. ಈ ಅವಧಿಯಲ್ಲಿ ನಾನು ಗ್ರಂಥರಚನೆಯೊಂದನ್ನು ಬಿಟ್ಟು ಉಳಿದ ಸಮಯವನ್ನು ಬರಿ ಧ್ಯಾನ - ಚಿಂತನದಲ್ಲಿ ಕಳೆಯುತ್ತಿದ್ದೆ. ಹಸ್ತಿನಾವತಿ ಇಂದು ರಾಷ್ಟ್ರದ ಕೇಂದ್ರವಾಗಿದೆ. ಆದರೆ - ಅಲ್ಲಿಯೂ ಏಕಮತವಿಲ್ಲ.

ಧೃತರಾಷ್ಟ್ರನ ಮಗ ಈಗ ರಾಜ್ಯಭಾರ ಮಾಡುತ್ತಾನೆ. ಅವನ ತಾಯಿಯ ಸ್ವಭಾವ ಧೃತರಾಷ್ಟ್ರನ ಮಗನಲ್ಲಿ ಇಳಿದಿದೆ. ಒಳ್ಳೆಯದು ಎನ್ನುವುದು ಅವನಿಗೆ ಸ್ವಲ್ಪವೂ ಸೇರದು. ದೇವ, ದೇವಕಾರ್ಯ ಎಂದರೆ ಆತ ಉರಿದು ಬೀಳುತ್ತಾನೆ. ಆದರೆ ಸಾಮ್ರಾಜ್ಯ ರಕ್ಷಿಸಿಕೊಳ್ಳುವ ಬಲ ಈಗ ಇದೆ. ಅದನ್ನು ಬೆಳೆಸುವ ಹವಣು ಸಿಕ್ಕಿದೆ.

ಧೃತರಾಷ್ಟ್ರನ ಬಂಧು ಪಾಂಡುವಿನ ಮಕ್ಕಳು ಉಪವಾಸ, ವನವಾಸ ಕಳೆದು ತಮಗೆ ಬರುವ ರಾಜ್ಯಕ್ಕಾಗಿ ದುರ್ಯೋಧನನೊಡನೆ ಎಳೆದಾಡುತ್ತಾರೆ. ದೇಶದ ಪರಿಸ್ಥಿತಿ ಇಷ್ಟು ವಿಷಮಿಸಿದಾಗ ಇದರಲ್ಲಿ ಒಂದೇ ಒಂದು ಸಂತೋಷದ ಸಂಗತಿ - ಕೃಷ್ಣನದು!

ಭೂಮಿಯ ಋಷಿಗಳು ಏಕಕಂಠದಿಂದ ಕೂಗಿದ್ದಕ್ಕೆ ವಿಷ್ಣುವು ನೆಲಕ್ಕಿಳಿದು ಕೃಷ್ಣನಾಗಿ ಬಂದ. ಇಂದು ಹಸ್ತಿನಾವತಿಗೆ ಕೃಷ್ಣನದು ಕೇವಲ ರಕ್ತಸಂಬಂಧ ಅಷ್ಟೆ. ಆದರೆ ದೇಶವು ಆಡಳಿತಕ್ಕಾಗಿ ಹಸ್ತಿನಾವತಿಗೆ ನಮಸ್ಕರಿಸಬೇಕು. ಅಲ್ಲಿ ಅದನ್ನಾಳುವ ಚಕ್ರವರ್ತಿ ಇದ್ದಾನೆ, ನಿಜ. ಆದರೆ ಈ ಆಳುವವನ ಮೇಲೆ ಇನ್ನೊಬ್ಬಾತ ಆಳುವವನಿದ್ದಾನೆ. ಅವನು ಕೃಷ್ಣ.

ಕೃಷ್ಣನ ಬದುಕು ನನ್ನನ್ನು ಪೂರ್ತಿಯಾಗಿ ಸೆರೆ ಹಿಡಿದಿದೆ. ಈ ವೃದ್ಧಾಪ್ಯದಲ್ಲಿ ನನ್ನ ಚಿತ್ತವನ್ನು ಬಹಿರ್ಮುಖ ಮಾಡಿದಾಗ ನನಗೆ ದ್ವಾರಕೆಗೆ ಹೋಗಿ ನೆಲಸಬೇಕೆನಿಸುತ್ತದೆ. ನಾನು, ನಾರದರು ಕೂಡಿ ಅನೇಕ ಸಲ ದ್ವಾರಕೆಗೆ ಹೋಗಿ ಕೃಷ್ಣನನ್ನು ಕಂಡು ಬಂದೆವು. ಈಗ ದೇಶದಲ್ಲಿ ಆದ ಅವ್ಯವಸ್ಥೆ ಕೃಷ್ಣನಿಂದ ಸರಿಗೊಳ್ಳಬೇಕು. ಅದು ಸರಿಗೊಳ್ಳುವ ಮುನ್ನ ಅವ್ಯವಸ್ಥೆ ಇನ್ನೂ ಉಲ್ಬಣಿಸುತ್ತದೆ ಎಂದು ನಾರದರು ಹೇಳಿದ್ದು ಸತ್ಯ. ನಾರದರು ಯಾವಾಗಲೋ ಒಮ್ಮೆ ಭೂಮಿಗೆ ಬಂದಾಗ ಶಮ್ಯಾಶ್ರಮಕ್ಕೆ ಬರಬೇಕು. ನಾನು ಅವರು ಬರಲಿ ಬಿಡಲಿ ಮನಸ್ಸು ಬಂದಾಗ ಕೃಷ್ಣನ ಹತ್ತಿರ ಹೋಗುತ್ತಿದ್ದೆ. ಇತ್ತೀಚೆ ಆತ ಹೇಳಿದ, '' ಭಗವನ್ ನಾನೇ ತಮ್ಮಲ್ಲಿಗೆ ನಡೆದುಬರುತ್ತೇನೆ. ತಾವು ಇಲ್ಲಿಯವರೆಗೆ ಬರುವ ಶ್ರಮ ಏಕೆ ......?''

ಮತ್ತೆ ಶ್ರೀಕೃಷ್ಣ ತಾನೇ ನಗುತ್ತ ನುಡಿಯುತ್ತಾನೆ --

''ದ್ವಾರಕೆಯೂ ನೆಲವೇ ಅಲ್ಲವೆ? ತಮ್ಮ ಪಾದಧೂಳಿಯಿಂದ ಪುನೀತ್ರವಾಗುವ ಅವಕಾಶ ದ್ವಾರಕೆಗೆ, ಅದರ ನಿವಾಸಿಗಳಿಗೆ ಲಭ್ಯವಾಗುವುದನ್ನು ನಾನೇಕೆ ತಪ್ಪಿಸಬೇಕು? ಅರಮನೆಯಿಂದ ರಥ ಕಳಿಸುತ್ತೇನೆ - ವಿಮಾನ ಕಳಿಸುತ್ತೇನೆ ದಯಮಾಡಿಸಬೇಕು.''

ಅವನೂ ಹಲವು ಬಾರಿ ಶಮ್ಯಾಶ್ರಮಕ್ಕೆ ಬಂದು ಹೋಗಬೇಕು. ನಾನು ಕೃಷ್ಣನ ಜೀವನವನ್ನು ಕಂಡು ಮುಗ್ಧನಾಗಿ ಹೋದೆ. ನನ್ನ ಬರೆಹಕ್ಕೆ ಆತನೇ ನಾಯಕನಾದ. ಈ ಅವಧಿಯಲ್ಲಿ ನಾನು ''ಭಾಗವತ'' ವನ್ನು ಬರೆದೆ. ನನ್ನ ಸಾರಸ್ವತ ಸಮಗ್ರ ಶಕ್ತಿಯನ್ನು ಅದರಲ್ಲಿ ಹಾಕಿದೆ. ಇತರ ಪುರಾಣಗಳಿಗಿಂತ ಅದು ನನ್ನ ಹೃದಯವನ್ನು ಬಹಳ ಸೂರೆಗೊಂಡಿತ್ತು. ನಾನು ಅದನ್ನು ಮಂತ್ರಮಯವಾಗಿಸಬೇಕೆಂದಿದ್ದೆ. ಆದರೆ ಕೃಷ್ಣನ ವಿಷಯದಲ್ಲಿ ನನ್ನ ಅನಿಸಿಕೆಗಳು ಭಾವನೆಯ ಆವೇಗದಲ್ಲಿದ್ದವು. ನನ್ನ ಸಹಕಾರಿಗಳು ಅದನ್ನು ಮಂತ್ರ ಸಾಮರ್ಥ್ಯವುಳ್ಳ ಮಹಾಕೃತಿ ಎಂದರು. ಅದು ಶ್ರದ್ದೆಯ ಫಲ. ಆದರೆ ನನಗೆ ಗೊತ್ತು. ನಾನು ಕೃಷ್ಣ ಸನ್ನಿಧಿಯಲ್ಲಿದ್ದರೂ ಹೃದಯದ ಉಕ್ಕಿನಿಂದ ಭಾವನೆಗಳನ್ನು ಸ್ತಿಮಿತದಲ್ಲಿಡಲಾಗಲಿಲ್ಲ. ನನಗೆ ಕೃಷ್ಣನಿದ್ದರೆ - ತಪಸ್ಸು, ಜ್ಞಾನ, ಸಂಯಮ, ಸತ್ಯ - ಏಕೆ ಬೇಕು ಎನ್ನಿಸುತ್ತಿತ್ತು. ಇಷ್ಟು ಹುಚ್ಚು ಕೃಷ್ಣನ ಬಗ್ಗೆ ನನಗೆ!

ಭಾವನೆಯ ಕ್ಷೇತ್ರವನ್ನು ದಾಟಿ ಬಹುದೂರ ಹೋದ ನನ್ನನ್ನು ಕೃಷ್ಣ ತಂದು ಅದರಲ್ಲಿ ಅದ್ದಿದ. ಅವನ ಒಂದೊಂದು ಕೃತಿಯಲ್ಲಿಯೂ ನಾನು ಲೋಕೋತ್ತರತೆಯನ್ನು ಕಂಡೆ.

ಶೌರ್ಯದಲ್ಲಿ,

ತ್ಯಾಗದಲ್ಲಿ,

ಕರುಣೆಯಲ್ಲಿ,

ಪ್ರೇಮದಲ್ಲಿ,

ಕ್ರೌರ್ಯದಲ್ಲಿ-

ಎಲ್ಲದರಲ್ಲಿಯೂ ಆತನದು ಧೀರ ಹೆಜ್ಜೆ. ಅವನ ಜೀವಿತಕ್ಕೆ ಮಾರು ಹೋಗಿ ಜನಕ್ಕೆ ಕರ್ಣಾಮೃತವೆನ್ನಿಸುವ ಕೃತಿ ರಚಿಸಿದೆ. ಅದನ್ನು 'ಭಾಗವತ' ವೆಂದು ಕರೆದೆ.

ಪ್ರಚಂಡ ಜ್ಞಾನಿ, ಅನುಭಾವಿಯಾಗಿ ವಿಶ್ವಕ್ಕೆ ಉಪಕಾರ ಮಾಡುತ್ತಿರುವ ನನ್ನ ಚಿರಂಜೀವ ಶುಕ ಒಮ್ಮೆ ಶಮ್ಯಾಶ್ರಮಕ್ಕೆ ಬಂದ. ಇತ್ತೀಚೆ ನನಗೆ ಕೃಷ್ಣ ವ್ಯಾಮೋಹವೇ ಅಂಟಿ ಬಿಟ್ಟಿತ್ತು. ಆಶ್ರಮಪದಕ್ಕೆ ರಾಜ ಬರಲಿ, ಸೇವಕ ಬರಲಿ, ಕೃಷ್ಣನ ಕತೆಯ ಹತ್ತು ಪಂಕ್ತಿಗಳನ್ನು ಅವರೆದುರು ಓದಿದಾಗಲೆ ನನಗೆ ಸಮಾಧಾನ!

ತನ್ನ ಕೃತಿಯ ಬಗ್ಗೆ ವ್ಯಾಮೋಹ ವೃದ್ಧ ಲೇಖಕನಿಗೆ ಸಹಜ! ಆದರೆ ನನಗೆ ಕೃತಿಯ ಬಗ್ಗೆ ವ್ಯಾಮೋಹವಿರಲಿಲ್ಲ. ಅದರ ನಾಯಕನ ಬಗ್ಗೆ ಇತ್ತು. ಘನಮನದ ವಜ್ರಜೀವಿಯಾದ ನನ್ನನ್ನು ಕೃಷ್ಣ, ಜೀವಿತದ ಪ್ರವಾಹದಲ್ಲಿ ತೇಲುವ ಪುಟ್ಟ ನಾವೆಯಾಗಿ ಮಾಡಿದ!

ನಾನು ಒಮ್ಮೊಮ್ಮೆ ಕೃಷ್ಣ ಭಕ್ತಿಯಿಂದ ಅತಿ ನಮ್ರನಾದಾಗ ಒಳಗೆ ಯಾರೋ ನುಡಿದಂತಾಗುತ್ತದೆ.

"ವ್ಯಾಸ, ವಜ್ರದ ಕಾಂತಿಯಂತೆ ಬೆಳಗುವ ನೀನು ಇವನೊಬ್ಬನ ನೀರಲ್ಲಿ ಈಜುವ ಮೀನಾಗಿದ್ದೀ"

ನಿಜವೇ ಇತ್ತು! ಅದು ಈಗ ಹಲವು ತಪಗಳ ಹಿಂದಿನ ನಾರದರ ಧ್ವನಿ. ನಾರದರ ಆ ಮಾತು ಎಂದಾದರೂ ನೆನಪಾದರೆ ನನ್ನ ಇಂದಿನ ಹೆಜ್ಜೆ; ನಡೆಯುವ ಹಾದಿ ಹೇಗೋ ಎನಿಸುತ್ತದೆ.

ಇಂದು ನನ್ನ ಸಾಮರ್ಥ್ಯವೇನು?

ನಾನು ಕರೆದಾಗ ಇಂದ್ರ ಬರಬಹುದು.

ಗಾಳಿ ನಿಲ್ಲು ಎಂದರೆ ಮುಂದೆ ಸುಳಿಯುವುದಿಲ್ಲ. ದೇವತೆಗಳನ್ನು ನೆಲಕ್ಕೆ ತಂದು ನಾನು ಹೇಳಿದ ಕೆಲಸ ಮಾಡಿಸಬಲ್ಲೆ.......

ಆದರೆ..................?

ಇಂದ್ರ ನಾನಾಗಲಿಲ್ಲ.

ಇಂದ್ರನ ಕಡೆಯಿಂದ ಕೆಲಸ ಮಾಡಿಸಿದೆ ಅಷ್ಟೆ! ನಾರದರು - ನನಗೆ ಹೀಗೆ ಹೇಳಿದ್ದರು:

"ಇಂದ್ರನನ್ನು ಕರೆಯುವವರು ಲಕ್ಷ ಜನ. ಇಂದ್ರನಲ್ಲಿ ಹೋದವರು ಸಾವಿರ ಜನ!

ಆದರೆ ಇಂದ್ರನೇ ಆಗಿ ನಿಂತವರು ಯಾರು? ದ್ವೈಪಾಯನ, ನಿನ್ನಲ್ಲಿ ನಾನು ಇದನ್ನು ಅಪೇಕ್ಷಿಸಿದ್ದೇನೆ ....."

ಹಾಗಾದರೆ ನಾನು ಇಂದು ಬರಿ ಸೊನ್ನೆಯೆ? ಭಾರತ ವರ್ಷದ ಸಮಸ್ತ ಋಷಿಗಳಿಗೆ ಬಾದರಾಯಣನ ಬ್ರಹ್ಮ ಸೂತ್ರ ಶಿರೋಧಾರ್ಯ, ವಂದ್ಯ!

ಸಮಸ್ತ ಮುನಿಗಳಿಗೆ ನನ್ನ ಆಶ್ರಯಬೇಕು. ರಾಜರು, ಚಕ್ರವರ್ತಿಗಳು - ದೊಡ್ಡ ಮಾತಲ್ಲ. ವಿಷ್ಣುವಾದ ಶ್ರೀಕೃಷ್ಣ ನನ್ನನ್ನು ಅಭಿಮಾನದಿಂದ ಕಾಣುತ್ತಾನೆ. ವ್ಯಾಸನನ್ನು ಗೌರವಿಸಿ ಮನ್ನಿಸುತ್ತಾನೆ!

ನಾನು ದೊಡ್ಡವನು ನಿಜ!

ಋಷಿ, ಮುನಿಗಳ ಲೋಕದಲ್ಲಿ ನನ್ನ ಸಾರ್ವಭೌಮತ್ವ ಸರ್ವವಂದ್ಯವಾಗಿದ್ದುದು ಸತ್ಯ.

"ಈಗ ನೀನು ದೇವತೆಗಳ ನಾಯಕ. ದೇವತೆಗಳೇ ನಿನ್ನ ಗುಣವನ್ನು ಹಾಡಬೇಕಿತ್ತು ನಾರದರು ಹೇಳಿದ ದೀರ್ಘಧ್ವನಿ ನನ್ನ ಈ ಹೃದಯದಲ್ಲಿ ಲುಪ್ತಪ್ರಾಯವಾಗಿದೆ. ಆಗ, ಆಗಾಗ ಕೇಳುತ್ತಿದ್ದ ಈ ಧ್ವನಿ ಕಳೆದ ಐದು ತಪಗಳಲ್ಲಿ ನನ್ನ ಎಚ್ಚರದ ಕ್ಷಣಗಳಲ್ಲಿ ಕೇಳಿದ್ದಿಲ್ಲ. ಇಂದು ಮತ್ತೆ ಕೇಳಿಸಿತು.

ಇನ್ನೊಬ್ಬರ ಜೀವನವನ್ನು ನಾನು ಬರೆದೆ.

ನನ್ನ ಜೀವಿತವು ದೇವ ಲೇಖನವಾಗಲಿ ಎಂದು ಆ ದೇವಪುರುಷಿಯ ಮನೀಷೆ ಇತ್ತು; ಕೈಗೂಡಲಿ.

ತಪೋಬಲ ದಿಂದ ದೇವಗಿರಿಯನ್ನು ಏರಿದೆ. ದೇವ ಶಕ್ತಿಯ ಫಲಗಳನ್ನು ತಿಂದು ಜ್ಞಾನಾಮೃತ ಕುಡಿದೆ. ನಾನು ದೇವನಾಗಲಿಲ್ಲ. ದೇವ ಮಹಿಮೆಯನ್ನು ಹಾಡುವವನಾದೆ-

ತಪ್ಪೇ?

ಭಾರತದಲ್ಲಿ ಬಾಳಿದ ಯಾವನಿಗೆ ಈ ಬಲ ಇದೆ ? ಯಾರನ್ನು ತೋರಿಸಬೇಕಾದರೂ ಬೆರಳು ವ್ಯಾಸನ ಕಡೆಗೇ ಅಲ್ಲವೇ? ಇಂತಹ ಲೋಕದ ಏಕೈಕ ವಿಭೂತಿ ನಾನು.

ಆದರೆ ಮೊನ್ನೆಯೇ ಅಲ್ಲವೆ? ವೃಷಭಾದ್ರಿಯ ಕಂದರವೊಂದರಿಂದ ನಾನು ಶುಕನೊಡನೆ ಬರುತ್ತಿದ್ದೆ. ಮಧ್ಯಾಹ್ನವಾಗಿತ್ತು. ನಾವು ಸಮೀಪದಲ್ಲಿಯೆ ವಿಶ್ರಮಿಸಬೇಕಿತ್ತು. ಬಿಸಿಲು ತುಂಬ ಹೆಚ್ಚಿತ್ತು. ವೃದ್ಧಾಪ್ಯದ ನನ್ನ ಅಸಹಾಯಕತೆಯನ್ನು ಕಂಡು ಶುಕ ಬೇಗನೆ- ಮುಂದೆ ಮುಂದೆ ನಡೆದು ಸಮೀಪದ ಜಲಾಶಯದಲ್ಲಿ ಕಾಲ್ತೊಳೆದು ಹಣ್ಣು ತರುವುದಾಗಿ ಹೊರಟಿದ್ದ . ನಾನೂ ಅವನ ಹಿಂದೆಯೇ ಆಕಳ ಕೂಗಿನಳತೆಯಲ್ಲಿದ್ದೆ.

ಶುಕ ಕಾಲ್ತೊಳೆದು ಕೆಲ ಹಣ್ಣುಗಳನ್ನು ಹರಿದು ತಂದು ಅಲ್ಲಿಯೆ ತುಂಬಿರುವ ಸ್ವಚ್ಛವಾದ ಪುಷ್ಕರಣಿಯ ಸೋಪಾನದ ಮೇಲೆ ಇರಿಸಿ, ಇನ್ನಾವುದೋ ಹಣ್ಣುಗಳನ್ನು ಹರಿಯಲು ಹೋಗಿದ್ದಾನೆ. ಈ ಕಾಡು, ಶುಕನಿಗೆ ತುಂಬ ಪರಿಚಿತ. ಅವನ ಗುರುಕುಲವೂ ಇಲ್ಲಿಗೆ ಅತಿ ಸಮೀಪ!

ನಾನು ಪುಷ್ಕರಿಣಿಗೆ ಸಮೀಪಿಸುತ್ತಲೆ - ಅಲ್ಲಿ ಸ್ನಾನ ಮಾಡುವ ಕನ್ನಿಕೆಯರು ಒಮ್ಮೆಲೆ ಸೋಪಾನಗಳ ಮೇಲಿಟ್ಟ ತಮ್ಮ ಬಟ್ಟೆಗಳನ್ನು ಎಳೆದುಕೊಂಡು ಉಟ್ಟುಕೊಂಡು ಲಜ್ಜಾವನತರಾದರು! ನಾನು ಚಕಿತನಾದೆ. ನಾನೋ ಬೆಳ್ಳಿಗೂದಲಿನ ಹಣ್ಣು ತೊಗಲಿನ ವೃದ್ಧ ತಪಸ್ವಿ ಈ ಹೆಣ್ಣು ಜೀವ ನನ್ನ ಕಂಡು ಇಷ್ಟು ಚಕಿತರಾಗುವುದೆ?

ನನಗೆ ಶುಕನ ಆಕೃತಿ ನೆನಪಾಯಿತು.

ಆಲಕ್ಷ್ಯಲಿಂಗದ ಆತನಿಗೆ ಕೌಪೀನನವೊಂದಿದೆ ಮೈಯಲ್ಲಿ. ಆತ ನೀರಿಗಿಳಿದು ಮುಖಮಾರ್ಜನೆ ಮಾಡಿ ಹಣ್ಣು ತಂದು ಅವುಗಳನ್ನು ತೊಳೆದಿಟ್ಟರೂ ಈ ನೀರೆಯರು ನಗ್ನರಾಗಿಯೇ ನೀರಾಟವಾಡುತ್ತಿದ್ದರು.

ನನ್ನನ್ನು ಕಂಡರೆ - ಇಷ್ಟು ಭಯವೆ? ನನಗೆ ಏಕೊ ಸ್ವಲ್ಪ ವೇದನೆಯಾಯಿತು.

ಅಂದು ಆ ದಿನ - ಘೃತಾಚಿ ನನ್ನ ಆ ಹುಲ್ಲು ಗುಡಿಸಲಿಗೆ ಬಂದ ದಿನ ನೆನಪಾಯಿತು.

ಅಂದಿನ ನನ್ನ ಮನಸ್ಥಿತಿ.

ಅವಳ ರೂಪದ ಮುಂದೆ ನಿಲ್ಲುವ ರೂಪ ಭೂಮಿಯಲ್ಲಿ ಯಾವ ಸ್ತ್ರೀಗೆ ಇತ್ತು? ಅಲ್ಲಿಗೆ ಅವಳು ನನಗಾಗಿಯೇ ಬಂದಿದ್ದಳು. ನಾನು ಕೂಡ ಸಂತಾನ ಕಾಮಿಯೇ ಆಗಿದ್ದೆ. ಆದರೆ ನನ್ನು ನೋಡಿ ಲಜ್ಜಾವನಿತರಾದರು! ಬಟ್ಟೆ ಹಾಕಿಕೊಂಡರು. ಶುಕನನ್ನು ಕಂಡು ಹೀಗೆ ಮಾಡಲಿಲ್ಲ ಎಂಬುದೇ ನನ್ನ ಮನಸ್ಸಿನ ಹೊಯ್ದಾಟವಲ್ಲವೆ? ಮನಸ್ಸಿಗೆ ಸಮಾಧಾನವಾಗಲಿಲ್ಲ. ಮುಂದುವರಿದು ಬಟ್ಟೆ ಹಾಕಿಕೊಂಡು ಹೊರಟ ಬಾಲೆಯರ ಹತ್ತಿರ ಹೋಗಿ ನಿಂತೆ.

ಪಾಪ! ಅವರೆಲ್ಲರೂ ನನ್ನನ್ನು ಕಂಡು ಭಕ್ತಿಯಿಂದ ನಮಸ್ಕರಿಸಿದರು . ನಾನು ಅವರಿಗೆ ಕಲ್ಯಾಣ ಬಯಸಿದೆ. ನನ್ನ ಹೃದಯದಲ್ಲಿ ಕುಣಿಯುತ್ತಿದ್ದ ಶಂಕೆಯನ್ನು ಅವರಿಗೆ ಕೇಳಿದೆ.

''ಕೌಪೀನವಂತನಾದ ಶುಕನನ್ನು ಕಂಡು ನಾಚದ ನೀವು, ನನ್ನನ್ನು ನೋಡಿ ಲಜ್ಜಾವತಿಯರಾದಿರಿ ಏಕೆ......?''

ಯಕ್ಷ ಕನ್ನೆಯರು ತುಂಬ ಗಡಸುಗಾತಿಯರು. ''ಶುಕದೇವ ಅವಧೂತ. ಅವನಿಗೆ ಕಾಮ ಎನ್ನುವುದೇ ಗೊತ್ತಿಲ್ಲ. ತಾವೋ ತಪಸ್ವಿಗಳು. ಅದನ್ನೆಲ್ಲ ಅದುಮಿದ ಸಂಯಮ ಶೀಲರು- ಅದಕ್ಕಾಗಿ ಅಷ್ಟೆ!''

ನನಗೆ ನನ್ನ ದುರ್ಬಲತೆಯ ಅರ್ಥವಾಯಿತು.

ಈ ಪ್ರಸಂಗದ ಸ್ಮರಣೆ ನನ್ನನ್ನು ಪೂರ್ತಿ ಅಧೀರನನ್ನಾಗಿ ಮಾಡಿತು. ಲೋಕದ ಸಮಸ್ತ ಜನರಿಗೆ ವಂದ್ಯನಾದ ನಾನು ಅಂತರಂಗದಲ್ಲಿ ಏಕೋ ಅಧೀರನಾದೆ. ನಾರದರು ಒಮ್ಮೆಲೆ ಆಶ್ರಮದಲ್ಲಿ ಬಂದುದರಿಂದ ನನ್ನ ವಿಚಾರ ಚಕ್ರ ನಿಂತಿತು.

ನಾನು ನಾರದರೊಡನೆ ತುಂಬಾ ವಿಷಯಗಳನ್ನು ಮಾತನಾಡಿದೆ. ಹಸ್ತಿನಾವತಿಯಲ್ಲಿ ಇಂದು ತಪಸ್ಸಿನ ಸೋಲು ನಡೆದಿದೆ ಎಂದೂ ನಾರದರು ಹೇಳಿದರು.

ಭೀಷ್ಮ ಯೋಗಸಿದ್ಧ. ಅಲ್ಲದೆ ಸರ್ವ ರಾಜಕೀಯ ವ್ಯವಹಾರದಿಂದ ನಿವೃತ್ತನಾಗ ಬೇಕಾದವ. ಅಂತಹ ಮಹಾ ಜೀವ, ದುರ್ಯೋಧನನ ಚಾಂಚಲ್ಯಗಳನ್ನೆಲ್ಲ ಸಹನ ಮಾಡುತ್ತ ಅವನ ಅಮಾನುಷ ಕೃತಿಗೆ ಶೂರಾನ್ವಯದಿಂದ ಒಪ್ಪಿಗೆಯನ್ನೇ ಹೇಳುತ್ತಿದ್ದಾರೆ.

ಭೀಷ್ಮರನ್ನು ಬಿಡಿ, ದ್ರೋಣರ ಮಾತಾದರೂ ಏನು? ಏಕೆ ಆ ನಿಸ್ಪೃಹಿಗೆ ದುರ್ಯೋಧನನ ಹಂಗು? ಅಧರ್ಮವನ್ನು ಪ್ರತಿಭಟಿಸುವ ಅದಟು- ನ್ಯಾಯ ಬುದ್ಧಿ ಆ ವೃದ್ಧ ಆಚಾರ್ಯರಿಗೆ ಇಲ್ಲವೆ?

ಹೋಗಲಿ, ವೃದ್ಧರಾದ ಅವರ ಮಾತಿರಲಿ. ಅವರ ಚಿರಂಜೀವ ಅಶ್ವತ್ಥಾಮನ ಅವಸ್ಥೆ ಏನು? ಅಜ್ಞಾನ, ಅನ್ಯಾಯಗಳೆಂದರೆ ಉರಿದೇಳಬೇಕಿದ್ದ ಆತ ದುರ್ಯೋಧನನ ಕೈಗೊಂಬೆಯಾಗಿದ್ದಾನೆ.

ಇದೇನು ಕಾರಣ?

ನಾರದರ ಪ್ರಶ್ನೆ ಒಂದು ಅರ್ಥದಿಂದ ನನ್ನ ಬದುಕನ್ನೇ ಕುರಿತು ಇತ್ತು. ಅವರ ಜೀವನದ ಈ ಪ್ರಶ್ನೆ ಹೊರಗಿನದಿತ್ತು. ನನ್ನದು ಆಂತರಂಗಿಕವಾಗಿತ್ತು ಅಷ್ಟೆ?

ನಾನು ಮೌನದಿಂದಿರುವುದನ್ನು ಕಂಡು ನಾರದರು ಅದಕ್ಕೆ ತಮ್ಮದೇ ಆದ ಉತ್ತರ ಹೇಳಿದರು. '' ಕಾಲವನ್ನು ಮೀರುವ ಬಲ ಮನುಷ್ಯನಿಗೆ ಬರದಿದ್ದರೆ- ಕಾಲ ಆತನನ್ನು ತನ್ನ ಲೀಲೆಗೆ ಒಳಪಡಿಸಿಕೊಳ್ಳುತ್ತದೆ....''

ನಾರದರು ''ಪಾಂಡವ-ಕೌರವರ ವಿರೋಧದ ಬೇಗೆ ಹೇಗೆ ನಿಷ್ಕರ್ಷಕ್ಕೆ ಬರುತ್ತದೆ?'' ಎಂದಿದ್ದರು. ನನಗೆ ಪೂರ್ತಿ ಗೊತ್ತಿತ್ತು. ಇದು ಕೃಷ್ಣನಿಂದಲೇ ಮುಗಿಯಬೇಕು. ಮತ್ತು ಕೃಷ್ಣ ಈ ಬೇಗೆಯನ್ನು ನಂದಿಸಲೆಂದೇ ದಿನ ದಿನಕ್ಕೆ ಹಸ್ತಿನಾವತಿಯತ್ತ ತನ್ನ ದೃಷ್ಟಿಯನ್ನು, ಶಕ್ತಿಯನ್ನು ಕೇಂದ್ರೀಕರಿಸುತ್ತಿದ್ದ.

ನನಗೆ ಒಮ್ಮೆ ಶುಕ ಕೇಳಿದ್ದ.

''ಕೃಷ್ಣನ ಕತೆಯ ಮುಂದಿನ ಭಾಗವೇನು?''

ನಾನು ನಗುತ್ತಲೇ ಹೇಳಿದೆ.

27393

''ಅದು ನಡೆದಿದೆ- ಅದರ ಗಾಯನ ಪ್ರವಚನದಲ್ಲಿರುವ ನೀನೆ ಅದರ ಮುಂದಿನ ಭಾಗಗಳನ್ನು ಸೇರಿಸಿಕೊಳ್ಳಬೇಕು. ನೀನು ಸಮರ್ಥನೇ ಇದ್ದೀ''

ಶುಕನು ಕೃಷ್ಣ ಜೀವಿತದ ಬಗ್ಗೆ ಹಲವು ವಿವರಣೆ ಕೇಳಿದ. ನಾರದರ ಮನಸ್ಸಿನಲ್ಲಿದ್ದ ವಿಚಾರ ಶುಕನಿಂದ ಕಾರ್ಯಾಕಾರಿಯಾಗಲಿತ್ತು. ಒಡೆದು ಹೋಗಲಿರುವ ದೇಶದ ಬದುಕಿನಲ್ಲಿ ಭಕ್ತಿಯೊಂದೇ ಐಕ್ಯದ ಅನುಬಂಧವಾಗ ಬಲ್ಲದು.

ವ್ಯಕ್ತಿಯ ಹೃದಯದ ದ್ವೇಷ, ಭಯ ಅಸೂಯೆಗಳನ್ನು ಕಳೆದು ಜೀವನವನ್ನು ದುಃಖದಿಂದ, ದ್ವೇಷದಿಂದ ಐಕ್ಯ ಹಾಗು ಆನಂದದ ಕಡೆಗೆ ಕರೆದೊಯ್ಯುವ ಪ್ರಯತ್ನದಲ್ಲಿ ಶುಕ ಸೀಮಾಪುರುಷನಾಗಿದ್ದ. ಜ್ಞಾನ ಸಮೃದ್ಧಿಯಿಲ್ಲದೆ ಭಕ್ತಿ ಬೆಳೆಯಲಾರದೆಂಬುದು ಶುಕವಾಣಿ!

# ಕುರುಕ್ಷೇತ್ರ ಯುದ್ಧ

ಅಣ್ಣ ತಮ್ಮಂದಿರೊಳಗೆ ಹತ್ತಿದ ಬೆಂಕಿ ದೇಶವನ್ನೇ ತನ್ನ ಉರಿನಾಲಿಗೆಗಳಿಂದ ಎಳೆದು ಕಬಳಿಸಿತ್ತು. ಎರಡೂ ಬಣದವರು ದೇಶದ ಜನಬಲವನ್ನು, ಧನಬಲವನ್ನು ಯುದ್ಧಕ್ಕಾಗಿ ಬಳಿದು ತಂದಿದ್ದರು. ಈ ಯುದ್ಧದಲ್ಲಿ ಯಾರಿಗೆ ಗೆಲುವಾದರೂ ಸುಖವಿರಲಿಲ್ಲ.

ಜನ ಬದುಕಿದ್ದರೆ ರಾಜರಿಗೆ, ರಾಜಕೀಯಕ್ಕೆ ಅರ್ಥ. ಯುದ್ಧದ ಕಾರ್ಮೋಡಗಳನ್ನು ನೋಡಿದರೆ ಇದು ಜನತೆಯನ್ನು ನಿರ್ನಾಮ ಮಾಡುವುದಕ್ಕೆ ಕವಿದು ನಿಂತಂತೆ ಕಾಣುತ್ತಿತ್ತು. ಕುರುಕ್ಷೇತ್ರದಲ್ಲಿ ಎರಡೂ ಸೇನೆಗಳು ಒಂದನ್ನೊಂದು ತುಡುಕಲು ಕಾದಿದ್ದವು.

ನಾನು ಈ ಜಗಳದುದ್ದಕ್ಕೂ ಬಹಳ ಮಟ್ಟಿಗೆ ಕೈಹಾಕಿರಲೇ ಇಲ್ಲ. ಇದರಲ್ಲಿ ಭೀಕರ ಜನಸಂಹಾರ ಅಗತ್ಯವಾಗಿದೆ ಎಂದು ಕೃಷ್ಣ ನನಗೊಮ್ಮೆ ಹೇಳಿದ್ದ. ನಾನು ಹಾಗೂ ನಾರದರು ದೂರ ಗಂಗಾ ತೀರದಲ್ಲಿ ಬೀಡು ಬಿಟ್ಟಿದ್ದೆವು. ಯುದ್ಧದ ಪರಿಣಾಮ ನೋಡಲು ಅವರು ಸ್ವರ್ಗದ ಕೆಲ ಪ್ರತಿನಿಧಿಗಳೊಂದಿಗೆ ಬಂದಿದ್ದರು. ನಿತ್ಯವೂ ನಮ್ಮ ಆಶ್ರಮ ವಾಸಿಗಳಿಬ್ಬರು ರಣಭೂಮಿಯ ವಾರ್ತೆಗಳನ್ನು ಹೇಳುತ್ತಿದ್ದರು. ಆ ದಿನ ಯುದ್ಧ ಹೆಚ್ಚುಕಡಿಮೆ ಮುಗಿದಂತಾಗಿದೆ ಎಂದು ನಿನ್ನೆಯೆ ನಮ್ಮ ಆಶ್ರಮವಾಸಿಗಳು ಹೇಳಿದ್ದರು. ಆದರೂ ಇನ್ನೂ ರಣದಿಂದ ಕೌರವ ಸೈನ್ಯ ಶರಣಾಗತಿಯನ್ನಾಗಲಿ, ಹಿಂದೆ ಸರಿಯುವುದನ್ನಾಗಲಿ ಹೇಳಿರಲಿಲ್ಲ. ಪಾಂಡವರು ಜಯದ ಉತ್ಸಾಹದಲ್ಲಿ ತಮ್ಮ ಶಿಬಿರಗಳಲ್ಲಿ ವಿಜಯದ ಉತ್ಸವ ಜರುಗಿಸುತ್ತಿದ್ದರು.

ಧೃಷ್ಟದ್ಯುಮ್ನನಿಗೆ ಸೈನ್ಯದಲ್ಲಿ ಅಲ್ಲಲ್ಲಿ ಸತ್ಕಾರಗಳು ನಡೆದಿದ್ದವು. ಪಾಂಡವರಿಗೆ ಅವನೇ ಏಕಮೇವ ಸೇನಾಪತಿ. ಆತನ ಯುದ್ಧಾರಂಭ ವಿಜಯದಲ್ಲಿ ಸಮಾಪ್ತಿಗೊಂಡಿತ್ತು. ಅದು ಅವನಿಗೆ ಕೀರ್ತಿಕರವಾಗಿತ್ತು. ಆ ದಿನ ಬೆಳಗಿನ ಮೊದಲನೆಯ ಪ್ರಹರ ಅದೇ ಮುಗಿಯುತ್ತಿತ್ತು. ಮುಗಿಲಿನಲ್ಲಿ ಅದ್ಭುತ ಸ್ಫೋಟಗಳು ಆರಂಭವಾದವು. ನಾವು ಗುಡಿಸಲಿನ ಹೊರಗೆ ಬಂದು ದೂರ ಗಗನದಲ್ಲಿ ನೋಡುತ್ತೇವೆ. ಗಗನದಲ್ಲಿ ಮನೆಗಳೂ ಬೆಟ್ಟಗಳೂ ಪುಟಿದೆದ್ದು ಬೀಳುತ್ತಿರುವ ಘೋರ ದೃಶ್ಯ ಕಂಡಿತು.

ಮುಗಿಲಿನೆತ್ತರಕ್ಕೂ ಜ್ವಾಲೆ ತನ್ನ ಕೆನ್ನಾಲಿಗೆ ಚಾಚಿ ಹಬ್ಬಿತ್ತು. ದೂರದಿಂದ ತೂರಿ ಬಂದು ಬೀಳುತ್ತಿರುವ ಕೈಕಾಲು, ವಿವಿಧ ಅವಯವಗಳು ಭಗ್ನಗೊಂಡ ಮನುಷ್ಯರ ದೇಹಗಳು; ಕುದುರೆ, ಆನೆ, ಒಂಟೆಗಳ ಹೆಣಗಳು ನಾವು ನೋಡುತ್ತಿದ್ದಂತೆಯೆ ಬಯಲಿನಲ್ಲಿ ತುಂಬಿ ಬಿದ್ದವು.

ಒಂದು ಕ್ಷಣ ನಾವು ಚಕಿತರಾದೆವು. ಯುದ್ಧ ಮುಗಿದಿತ್ತು. ಎರಡು ಪಕ್ಷದ ಸೈನ್ಯದಲ್ಲಿ ಒಂದು ಪೂರ್ತಿ ನಾಶವಾಗಿ ಹೋಗಿತ್ತು. ಇಂತಹ ಈ ಸನ್ನಿವೇಶದಲ್ಲಿ ಪ್ರಚಂಡ ರಣರಂಗದಲ್ಲಿ ಉಪಯೋಗಿಸದಂತಹ ಭೀಷಣ ಅಸ್ತ್ರವನ್ನು ಯಾರು ಉಪಯೋಗಿಸಿದರು? ಯಾರು ಉಪಯೋಗಿಸಿದರು?

''ಪಾಂಡವರೇನಾದರೂ ರಣೋನ್ಮತ್ತರಾಗಿ ಇದನ್ನು ಪ್ರಯೋಗಿಸಿದರೆ'' - ಎಂದು ನಾರದರು ಶಂಕಿಸಿದರು. ನಾನು ಸುತ್ತಲೂ ನೋಡಿದೆ. ಈ ಅಸ್ತ್ರವಾದರೂ ಯಾವದಿರಬಹುದು ಎಂದು. ನೋಡುವುದರೊಳಗಾಗಿಯೆ ನಮ್ಮಿಂದ ಅನತಿ ದೂರದಲ್ಲಿಯೇ ಒಂದು ಬೆಟ್ಟದ ತುಂಡು ಹಾರಿ ಬಂದು ಬಿತ್ತು.

ನನಗೆ ತಿಳಿಯಿತು. ಇದು ಖಂಡಿತ ಬ್ರಹ್ಮ ಶಿರೋಸ್ತ್ರ ಎಂದು......

''ನಾರದರೆ, ಈ ರಾಜರ ಮೂರ್ಖತನಕ್ಕೆ ಇತಿಮಿತಿ ಇಲ್ಲ. ನೋಡಿ, ಇದು ಯಾವ ಅಸ್ತ್ರ ಗೊತ್ತಾಯಿತೇ ?''- ಎನ್ನುವುದರೊಳಗಾಗಿ ಮತ್ತೆ-ಭೀಷಣ ಸ್ಫೋಟ... ಅದೇ ಅಗ್ನಿ ಪ್ರವಾಹ ಬ್ರಹ್ಮಾಂಡ ತುಂಬುವ ಧೂಮದ ಬುಗ್ಗೆ!

ನಾವು ಚಕಿತರಾಗಿ ಆ ಕ್ರೂರ ಅಸ್ತ್ರ ಪ್ರಯೋಗದ ಸಂಹಾರ ತಾಂಡವವನ್ನು ನೋಡುತ್ತಿದ್ದೆವು. ನಾನು ನಾರದರಿಗೆ ಹೇಳಿದೆ -''ನಾರದರೆ, ಇದು ಈ ಮೊದಲೆ ಸ್ಫೋಟವಾದ ಅಸ್ತ್ರಕ್ಕೆ ಪ್ರತ್ಯುತ್ತರ. ಈ ರಾಜರು ಸಾವಿನ ಮೇಲೆ ಸಾವು ಎಸೆದು ಬದುಕುವ ಆಶೆ ತಾಳಿದ್ದಾರೆ.....''

ನಾರದರು ದೃಶ್ಯದ ಭೀಕರತೆಯನ್ನು ನೋಡುವಲ್ಲಿಯೇ ಮಗ್ನರಾಗಿದ್ದರು.

ಎಷ್ಟೋ ಸಮಯ ಕಳೆಯಿತು. ನಾನು ಹಾಗೂ ನಾರದರು ನಮ್ಮ ಬಿಡಾರದಿಂದ ಹೊರಗೆ ಹೊರಟೆವು. ದಾರಿ ಎಂಬುದೇ ಇರಲಿಲ್ಲ. ಎಲ್ಲಿ ನೋಡಿದರಲ್ಲಿ ಹೆಣಗಳು. ಬಿದ್ದ ಮನೆಗಳ ಅವಶೇಷಗಳು. ನಾವು ಹಾಗೆಯೆ ಮುಂದೆ ಸಾಗಿದೆವು. ಒಂದೆರಡು ಕ್ರೋಶ ನಡೆದು ದಾರಿಯಲ್ಲಿ ಕಣ್ಣು ತಿವಿಯುವ ಭೀಕರ ದೃಶ್ಯವನ್ನು ನೋಡುತ್ತ ಮುಂದೆ ಬಂದೆವು. ಅಲ್ಲಲ್ಲಿ ಚೀತ್ಕಾರ ನವೆದಾಟಗಳ ದಾರುಣ ದೃಶ್ಯಗಳು. ಮನುಷ್ಯನ ಎದೆಯನ್ನು ಬಿರಿದು ಮೂರ್ಛೆಗೊಳಿಸುವಂತಿದ್ದವು.

ಹಾದಿ ಹಾದಿಯಲ್ಲಿ ಮಾನವನ ಕರುಳನ್ನೇ ಕಿತ್ತು, ಅವನ ಸಹನೆಯನ್ನು ಕೆಣಕುವ ದೃಶ್ಯಗಳು! ನಾವು ಮೌನದಿಂದಲೆ ಈ ಸಂಹಾರ ಭಯಂಕರತೆಯನ್ನು ಚಿಂತಿಸುತ್ತ ಇನ್ನೂ ಮುಂದೆ ಸಾಗಿದೆವು. ನಮ್ಮ ಕಣ್ಣಳತೆಯಲ್ಲಿಯೆ ದೂರದಲ್ಲಿ ರಥಗಳ ಗುಂಪೊಂದು ಕಂಡಿತು.

ನಾರದರು ಕೇಳಿದರು : ''ಈ ಸಂಹಾರದಲ್ಲಿ ಯಾವ ಕೈ ಕೆಲಸ ಮಾಡಿದೆ ?''

ನನಗೆ ಈ ದಾಯಾದಿಗಳ ಇತಿಹಾಸ ಪೂರ್ತಿ ಗೊತ್ತು! ಈ ಸಂಹಾರ ಬ್ರಹ್ಮಾಸ್ತ್ರದ ಭೀಕರ ಪರಿಣಾಮವೆಂಬುದೂ ನನಗೆ ಗೊತ್ತಾಗಿತ್ತು. ಬ್ರಹ್ಮಾಸ್ತ್ರಗಳು ಈ ಎರಡೂ ಸೈನ್ಯಗಳಿಗೆ ಗೊತ್ತು

ಅರ್ಜುನ, ಅಶ್ವತ್ಥಾಮರಿಗೆ ಗೊತ್ತು. ಒಂದೇ ವೇಳೆಗೆ ಎರಡೂ ಸ್ಫೋಟವಾಗಿದ್ದರಿಂದ ಇದರ ದೌರ್ಜನ್ಯ ಅವರಿಬ್ಬರ ಪಾಲಿಗೇ ಇತ್ತು. ನಾನು ಹೇಳಿದೆ - ''ಇದು ಅಶ್ವತ್ಥಾಮ, ಅರ್ಜುನರ ಮನೆಮುರುಕತನದ ಪರಿಣಾಮವಾಗಿದೆ.....''

ನಾರದರು ಚಕಿತರಾದರು -'' ಅದು ಹೇಗೆ? ಅರ್ಜುನನ ಬೆನ್ನ ಹಿಂದೆ ಕೃಷ್ಣನಿಲ್ಲವೆ? ಅಶ್ವತ್ಥಾಮನಂತಹ ವಿಪ್ರ ಹೃದಯ ಇಷ್ಟು ಭೀಕರ ಸಂಹಾರವನ್ನು ಬಯಸಿತೆ ?''

''ಕೃಷ್ಣನಿಗೆ ಸಂಹಾರವೇ ಪ್ರಿಯವಾಗಿತ್ತು. ಅವನು ಅದನ್ನು ಮಾಡಬೇಕೆಂದೇ ಮಾಡಿದ್ದಾನೆ. ಅಶ್ವತ್ಥಾಮನಿಗೆ ಜೀವನ ಮರಣ ಪ್ರಶ್ನೆ ಬಂದಿರಬೇಕು. ಇದು ಅವನ ಜೀವಿತದ ಕೊನೆಯ ಹೋರಾಟ......''

ನಾವಿಬ್ಬರು ಯುದ್ಧ ಭೂಮಿಯನ್ನು ತಲುಪಿದೆವು. ಉರಿಯುತ್ತಿರುವ ಪ್ರಳಯಾಗ್ನಿಯಂತೆ ಅಶ್ವತ್ಥಾಮ ನಿಂತಿದ್ದ. ಅರ್ಜುನನು ನನ್ನನ್ನು ನೋಡುತ್ತಲೆ ರಥದಿಂದ ಇಳಿದು ಬಂದು ನಮಸ್ಕರಿಸಿದ. ಅಶ್ವತ್ಥಾಮನೂ ಧಾವಿಸಿ ಬಂದು ವಂದಿಸಿದ.

ಅವರನ್ನು ನಾನು ಕ್ಷಮಿಸುವ ಸ್ಥಿತಿಯಲ್ಲೇ ಇರಲಿಲ್ಲ. ''ನೀವಿಬ್ಬರು ಮಾನವ ಕುಲವಿರೋಧಿಗಳು. ಇಂತಹ ಭೀಷಣಾಸ್ತ್ರವನ್ನು ಪ್ರಯೋಗಿಸಲು ನಿಮಗೆ ಹೇಗೆ ಮನಸ್ಸಾಯಿತು? ಈಗ ನೀವು ಇದನ್ನು ಉಪಸಂಹರಿಸಿರಿ.''

ನನ್ನ ಮುಖವೂ ಕ್ರೋಧದಿಂದ ತಪ್ತವಾಯಿತು. ಅರ್ಜುನನು ಗಡಗಡನೆ ನಡುಗಿ ತನ್ನ ರಥಕ್ಕೆ ಓಡಿದ. ತನ್ನ ಈ ಭೀಷಣ ಮಾರಕಾಸ್ತ್ರವನ್ನು ಉಪಸಂಹರಿಸಿದ. ಅಶ್ವತ್ಥಾಮ ಮಾತ್ರ ಅಪರಾಧಿಯಂತೆ ನನ್ನ ಹತ್ತಿರ ಕೆಳಗೆ ಮುಖಮಾಡಿ ನಿಂತುಕೊಂಡಿದ್ದ. ನಾನು ಅಶ್ವತ್ಥಾಮನನ್ನು ಕೇಳಿದೆ--

''ಆಚಾರ್ಯ ಪುತ್ರನಾದ ನೀನು ಇಂತಹ ಅಕಾರ್ಯ ಏಕೆ ಮಾಡಿದಿ?''

ಅಶ್ವತ್ಥಾಮ ವಿಷಾದಭರ ಧ್ವನಿಯಲ್ಲಿ ಹೇಳಿದ:

''ಯುದ್ಧದಲ್ಲಿ ನಮ್ಮ ಪಕ್ಷ ಪೂರ್ತಿ ಸೋತು ಹೋಯಿತು. ಅದರಲ್ಲಿ ತಾತ, ನೀನು ತುಂಬ ನಂಬಿಕೊಂಡ ಕೃಷ್ಣನ ಕುಹಕ ಅಷ್ಟಿಷ್ಟಲ್ಲ. ಕೌರವ ನಾಯಕ ದುರ್ಯೋಧನನನ್ನು ಇದೇ ಈ ನಿನ್ನ ಎದುರಿಗೆ ನಿಂತ ಭೀಮ ಅಧರ್ಮದಿಂದ ತೊಡೆ ಮುರಿದು ಚೆಲ್ಲಿದ. ದುರ್ಯೋಧನನ ಬೆನ್ನಿಗೆ ನಾವೆಲ್ಲ ಪರಾಕ್ರಮಿಗಳಿದ್ದರೂ ಅವನಿಗೆ ಸಾವು ತಪ್ಪಲಿಲ್ಲ. ನನಗೆ ನೆತ್ತರು ಕುದಿದು ಹೋಯಿತು. ಸಾಯುವ ಹೊತ್ತಿನಲ್ಲಿ ದುರ್ಯೋಧನನಿಗೆ ರವದಷ್ಟಾದರೂ ಸಮಾಧಾನವೆನ್ನಿಸುವುದನ್ನು ಏನಾದರೂ ಮಾಡುವುದು ನನ್ನ ಕರ್ತವ್ಯವಾಗಿತ್ತು. ಆದಿನ ರಾತ್ರಿ ನಾನು ಪಾಂಡವ ಶಿಬಿರವನ್ನು ಹೊಕ್ಕು ದ್ರೌಪದಿಯ ಐದು ಜನ ಮಕ್ಕಳನ್ನು ತುಂಡರಿಸಿದೆ. ನನ್ನ ತಂದೆಯ ಶಿರಚ್ಛೇದ ಮಾಡಿದ ಆ ಪಾಪಿ, ಧೃಷ್ಟದ್ಯುಮ್ನನನ್ನು ಕಡಿದು ತುಂಡು ಮಾಡಿದೆ!

"ಬೆಳಗಾಗುತ್ತಲೆ ದ್ರೌಪದಿ ಆಕ್ರೋಶ ಮಾಡಿದಳು. ಈ ಭೀಮ ನನ್ನ ನೆತ್ತರು ಕುಡಿಯುವೆನೆಂದು ಪಣ ತೊಟ್ಟು ಬಂದ. ಭೀಮನಿಗೆ ಎಲ್ಲಿ ಏನಾಗುವುದೋ ಎಂಬ ಭೀತಿಯಿಂದ ಅವನ ಬಂಧುಗಳು ಬೆಂಗಾವಲಿಗೆ ಧಾವಿಸಿದರು. ಭೀಮ ನನ್ನನ್ನು ಕಂಡೊಡನೆಯೆ ನನ್ನ ಜೀವ ತೆಗೆಯುವ ಪರಮ ಭಯಂಕರವಾದ ಅಸ್ತ್ರವೊಂದನ್ನು ತೊಟ್ಟ. ನನಗೆ ಪ್ರಾಣ ಭಯ ಬಂತು....."

ನಾನು ವಿಸ್ಮಿತನಾಗಿ ಕೇಳಿದೆ--

"ಆಚಾರ್ಯ ಪುತ್ರ, ಚಿರಂಜೀವಿಯಾದ ನಿನಗೆಲ್ಲಿಯ ಪ್ರಾಣ ಭಯ? ಸುಮ್ಮನೆ ವ್ಯರ್ಥವಾಗಿ ಹಾಗೇಕೆ ಭಾವಿಸಿದೆ?"

ವಿಷಾದದಿಂದ ಅಶ್ವತ್ಥಾಮ ಗದ್ಗದ ಸ್ವರದಲ್ಲಿ ಹೇಳಿದ:

"ತಾತ, ಯುದ್ಧದಲ್ಲಿ ಕ್ರೋಧೋನ್ಮತ್ತರಾದ ನಮಗೆ ನಮ್ಮ ಜೀವಿತದ ಬಗ್ಗೆ, ಇಲ್ಲವೆ ಅನ್ಯರ ಜೀವದ ಬಗ್ಗೆ ಎಲ್ಲಿಯ ತಿಳುವಳಿಕೆ? ಭೀಮನ ಬಾಣದಿಂದ ನನ್ನ ಪ್ರಾಣ ಹೋಗುವುದಾಗಿ ಭಯವೆನ್ನಿಸಿತು. ಕೊನೆಗೆ ನಿರುಪಾಯನಾಗಿ ನಾನು ಈ ಬ್ರಹ್ಮ ಶಿರೋಸ್ತ್ರ ಪ್ರಯೋಗಿಸಬೇಕಾಯಿತು?"

27393

"ನಿನ್ನ ತಂದೆ ಈ ಅಸ್ತ್ರದ ಬಗ್ಗೆ ನಿನಗೆ ಎಚ್ಚರಿಕೆ ನೀಡಿದ್ದಿಲ್ಲವೆ?......"

"ನೀಡಿದ್ದರು. ಇದು ಪ್ರಯೋಗಿಸುವ ಅಸ್ತ್ರವೇ ಅಲ್ಲ. ಆದರೂ ರಕ್ಷಣೆಯ ಅಸ್ತ್ರವೆಂದು ಇರಬಹುದಾದ ಅಸ್ತ್ರ ಇದು ಎಂದು ನನಗೂ ಹೇಳಿದ್ದರು. ಅರ್ಜುನನಿಗೂ ಹೇಳಿದ್ದರು. ಅರ್ಜುನ ಇದನ್ನು ಸಂಪಾದಿಸಿದ ಮೇಲೆ, ದುರ್ಯೋಧನ ಒಮ್ಮೆ ಬಂದು ನನಗೆ ಹೇಳಿದ. ಅವನ ಮಾತಿನ ಮೇರೆಗೆ ಈ ಪ್ರಚಂಡ ಮಾರಕಾಸ್ತ್ರ ನನಗೆ ಇರುವುದೂ ಅಗತ್ಯವಿತ್ತು. ನಾನು ತಂದೆಯವರನ್ನು ಕಾಡಿಸಿ, ಪೀಡಿಸಿದೆ. ತಂದೆಯವರು ಎಷ್ಟೋ ಸಲ ನಿರಾಕರಿಸಿದರು. ಕೊನೆಗೆ ಅವರು ನನ್ನ ಮೇಲಿನ ಪ್ರೇಮದಿಂದ ಈ ಅಸ್ತ್ರವನ್ನು ತೊಡಲು ಮಾತ್ರ ಹೇಳುತ್ತೇನೆಂದು ಹೇಳಿದರು. ನನಗೆ ಅಷ್ಟು ಸಿಕ್ಕರೂ ಸಾಕಿತ್ತು. ಈ ಅಸ್ತ್ರ ನಮ್ಮಲ್ಲಿಯೂ ಇದೆ ಎನ್ನಿಸಿದಂತಾಗಿತ್ತು. ನಾನು ಅವರಿಂದ ಅದರ ವಿವರ ಕೇಳಿ ತಿಳಿದೆ! ನನಗೆ ಅಸ್ತ್ರದ ಉಪಸಂಹರಣೆ ಬರದು. ಕ್ಷಮಿಸಬೇಕು......."

ಅಶ್ವತ್ಥಾಮ ಕ್ಷಮಾರ್ಹನಲ್ಲದಿದ್ದರೂ ಅವನ ಅಸಹಾಯ ಪರಿಸ್ಥಿತಿಯ ಬಗ್ಗೆ ಕನಿಕರ ಬಂತು. ಆದರೆ - ಆತ ಅಸ್ತ್ರ ಉಪಸಂಹರಿಸದೆ ಮುಂದೆ ಸಾಗುವಂತಿರಲಿಲ್ಲ.

ಕೊನೆಗೆ ಕೃಷ್ಣ, ಇನ್ನು ಈ ಅಸ್ತ್ರವಿದ್ಯೆಯಲ್ಲಿ ತಲೆ ಹಾಕದಂತೆ ಅಶ್ವತ್ಥಾಮನ ತಲೆಯನ್ನು ನಿಷ್ಕ್ರಿಯಗೊಳಿಸಲು ಆತನ ತಲೆಯಲ್ಲಿ ಬುದ್ಧಿ ಇರುವ ಭಾಗವನ್ನೆ, ಶಸ್ತ್ರಕ್ರಿಯೆಯಿಂದ ತೆಗೆದು ಹಾಕಿಸಿದ. ಅಶ್ವತ್ಥಾಮ ಹುಚ್ಚು ಹಿಡಿದಂತಾಗಿ ರಣಕ್ಷೇತ್ರದಿಂದ ಕಾಲ್ದೆಗೆದು ಕಾಡು ಪಾಲಾದ.

ಪಾಂಡವ ಕೌರವರ ದಾಯಾದಿತನ ಒಬ್ಬ ಹೆಂಗಸಿನ ಅವಮಾನದಿಂದ ಪುಟಗೊಂಡು ಒಬ್ಬ ವಿಪ್ರನ ಹುಚ್ಚಿನಲ್ಲಿ ಮಾಕ್ತಾಯಗೊಂಡಿತು. ನಾರದರು ಈ ವಿಚಿತ್ರ ಪ್ರಕರಣಕ್ಕೆ ಸಾಕ್ಷಿಯಾಗಿ ನಿಂತಿದ್ದರು.

ನಾನು ರಣಕ್ಷೇತ್ರಕ್ಕೆ ಬಂದುದನ್ನು ಕೃಷ್ಣ ಅರಿತು ಪಾಂಡವರಿಗೆ ನನ್ನನ್ನು ಕರೆದು ತಮ್ಮ ಶಿಬಿರದತ್ತ ಕರೆದುಕೊಂಡು ಹೋಗಲು ತಿಳಿಸಿದ

ಯುದ್ಧ ಮುಗಿದು ಹೋದರೂ ಅದರ ಶೋಕ ಇನ್ನೂ ಬಲವಾಗಿತ್ತು. ಪಾಂಡವರು ವಿಜಯದಲ್ಲಿದ್ದರು. ತನ್ನ ಹಲವಾರು ಮಕ್ಕಳನ್ನು ಕಳೆದುಕೊಂಡು ಧೃತರಾಷ್ಟ್ರ ಹಾಗೂ ಅವನ ಹೆಂಡತಿ ಅಪಾರನೋವಿಗೀಡಾದರು. ಈ ಪುತ್ರ ಶೋಕ ಪೀಡಿತ ದಂಪತಿಗಳನ್ನು ಕರೆದುಕೊಂಡು ರಣಭೂಮಿಯಲ್ಲಿ ತಿರುಗುವ ಭಾಗ್ಯ ನನ್ನ ಪಾಲಿಗೆ ಬಂದಿತ್ತು! ಆದರೆ ನನ್ನ ಮನಸ್ಥಿತಿ ಮಾತ್ರ ವ್ಯಗ್ರವಿದ್ದಿಲ್ಲ. ಈ ಸಂಹಾರ ಸತ್ರವು ನನಗೆ ಅನಿವಾರ್ಯವೆನ್ನಿಸಿತ್ತು. ಪಾಂಡು -ಧೃತರಾಷ್ಟ್ರರಿಬ್ಬರೂ ಒಂದು ದೃಷ್ಟಿಯಿಂದ ನನ್ನ ಸಂತಾನವೇ ಆಗಿದ್ದರು. ಆದರೆ, ಇವರ ಮನೋವೃತ್ತಿಯ ಮೇರೆಗೆ ಒಂದು ವಂಶದ ನಿರ್ಮೂಲವಾಗಲೇಬೇಕಿತ್ತು. ಕೃಷ್ಣ ಬೆನ್ನಿಗೆ ನಿಂತಿರದಿದ್ದರೆ, ದುರ್ಯೋಧನ ಗೆಲ್ಲುತ್ತಿದ್ದ ಎಂಬುದರಲ್ಲಿ ಶಂಕೆಯಿಲ್ಲ. ಏಕೆಂದರೆ ವಿಜಯಕ್ಕೆ ಬೇಕಾಗುವ ಎಲ್ಲ ಅನುಕೂಲತೆಗಳೂ ಅವನಿಗಿದ್ದವು. ಪಾಂಡವರಿಗಿದ್ದುದು, ಈ ಎಲ್ಲ ಅನುಕೂಲತೆಗಳಿಲ್ಲದಿದ್ದರೂ ವಿಜಯ ಕೈಸೇರುವ ನೆರವು- ಅದೇ ಶ್ರೀಕೃಷ್ಣ!

ಯುದ್ಧದಲ್ಲಿ ತನ್ನ ಮಕ್ಕಳ ಹೆಣಗಳನ್ನು ನೋಡಿ ಗಾಂಧಾರಿಗೆ ನಾನೇ ಅವಳ ಕಣ್ಣಿನ ಕಟ್ಟು ತೆಗೆದು ಹಾಕಿದೆ. ನಾವೆಲ್ಲ ರಣ ಭೂಮಿಯಲ್ಲಿ ಒಂದೊಂದೇ ಹೆಣವನ್ನು ಕಂಡಾಗ ಅದಕ್ಕೆ ಸಂಬಂಧಿಸಿದ ವ್ಯಕ್ತಿಗಳು ಪ್ರಚಂಡ ದುಃಖದ ಆವೇಗಕ್ಕೆ ಬಲಿಯಾಗುತ್ತಿದ್ದರು. ನಾನು ಧೃತ ರಾಷ್ಟ್ರ ಗಾಂಧಾರಿಯನ್ನು ನಡೆಸುತ್ತ ನಡೆದಿದ್ದೆ. ಅವರಿಗೆ ಆಲಂಬನವಾಗಿ ಪಾಂಡವರು ಇದ್ದರು. ಹಿಂದೆ ಕೃಷ್ಣ-ದ್ರೌಪದಿ ಬರುತ್ತಿದ್ದರು. ಕುಂತಿ, ಗಾಂಧಾರಿಯ ಬದಿಗಿದ್ದಳು.



ತನ್ನ ಮಕ್ಕಳ ಅನಾಥ ಮರಣವನ್ನು ನೋಡಿ ಗಾಂಧಾರಿ ಇದೆಲ್ಲ ಕೃಷ್ಣನ ಆಟವೆಂದು ಆತನನ್ನು ಬಲವಾಗಿ ಶಪಿಸಿದಳು.

''ಅಣ್ಣ ತಮ್ಮಂದಿರಲ್ಲಿ ಬಡಿದಾಟ ಹುಟ್ಟಿಸಿ ಬೆಳೆಸಿದ ನೀನು, ಇಂತಹ ದುಃಖಕ್ಕೇ ಬಲಿಯಾಗು. ನಿನ್ನ ಅಣ್ಣ ತಮ್ಮಂದಿರೂ ಬಡಿದಾಡಿ ಸಾಯಲಿ.....ನೀನೂ.....

ಗಾಂಧಾರಿಯು ತನಗೆ ಸ್ತ್ರೀ ಸಹಜವಾದ ಪರಿತಾಪದಿಂದ ಕೃಷ್ಣನನ್ನು ಶಪಿಸಿದಳು.

ನಾನು ಹಸ್ತಿನಾವತಿಯಲ್ಲಿ ಹಲವು ದಿನ ಕಳೆದೆ. ಒಮ್ಮೆ ಧರ್ಮರಾಜ ನನ್ನ ಹತ್ತಿರ ಬಂದು ಹೇಳಿದ:

''ತಾತ, -ಇಷ್ಟೆಲ್ಲ ಬಂಧುಹತ್ಯೆ, ಜನ ಸಂಹಾರಕ್ಕೆ ಕಾರಣ ನಾನು! ಆದ್ದರಿಂದ ನನಗೆ ಜೀವಿತದ ಮೇಲೆ ಜುಗುಪ್ಸೆ ಬಂದಿದೆ. ಆತ್ಮ ಹತ್ಯೆ ನನಗೆ ಅನಿವಾರ್ಯವೆನ್ನಿಸಿದೆ. ಒಂದು ದಿನ ಅದನ್ನು ನಾನು ಪೂರೈಸಲೇ ಬೇಕು.''

ಧರ್ಮರಾಜ ಬಹಳ ಭಾವನಾಪ್ರಧಾನ ಮನುಷ್ಯ. ಒಂದು ವಿಚಾರ ತಲೆಯಲ್ಲಿ ಹೊಕ್ಕರೆ ಅದರಿಂದ ಹಿಂತೆಗೆಯುವುದು ಕಷ್ಟ. ನಾನು ಅವನಿಗೆ ಸರಿಯಾಗಿ ಹೇಳಿದೆ. ಆತ್ಮ ಹತ್ಯೆ ಈಗ ಮಾಡಿದ ಒಂದು ಸಂಹಾರಕ್ಕಿಂತ ದೊಡ್ಡ ಅಪಾರಾಧವೆಂಬುದನ್ನು ಮನಗಾಣಿಸಿದೆ.

ಧರ್ಮ ತನ್ನ ಕ್ಷುದ್ರ ನಿಶ್ಚಯವನ್ನು ಬದಲಿಸಿದ. ಅವನಿಗೆ ಹೇಳಿದೆ-''ನಿನ್ನ ಪೂರ್ವಜರು ಹಿಂದೆ ಹಿಮಗಿರಿಯಲ್ಲಿ ಹಣ ಹೂತಿಟ್ಟಿದ್ದಾರೆ. ಅದನ್ನು ತೆಗೆದುಕೊಂಡು ಅಶ್ವಮೇಧ ಜರುಗಿಸು. ಯುದ್ಧದ ಮೂಲಕ ರಾಜ್ಯದ ಕೋಶವೆಲ್ಲ ಬರಿದಾಗಿದೆ.......''

ಧರ್ಮ ಒಪ್ಪಿ ನಮಸ್ಕರಿಸಿ ಹೊರಟ. ನಾನೂ ಆಶ್ರಮದೆಡೆಗೆ ನಾರದರೊಂದಿಗೆ ಹೊರಟೆ.''

# ಅಂತಿಮ ರಚನೆ

ನಾರದರಿನ್ನೂ ಶಮ್ಯಾಶ್ರಮದಲ್ಲಿದ್ದರು. ಶುಕ ಅವರಿಂದ ಯೋಗ ರಹಸ್ಯ ತಿಳಿದಿದ್ದ. ನನಗೆ ಶುಕ ಆಶ್ರಮವನ್ನು ಬಿಟ್ಟು ಹೋಗಬಾರದೆನ್ನಿಸುತ್ತಿತ್ತು. ನಾನು ನಾರದರ ಜೀವನದಿಂದ ತುಂಬ ಪ್ರಯೋಜನ ಪಡೆದೆನೆಂದು ನಾರದ ಪುರಾಣವನ್ನು ಆಗಲೆ ಬರೆದಿದ್ದೆ. ಈಗ ಬರೆದ ಪುರಾಣ ಸಂಖ್ಯೆ ಹದಿನೆಂಟಾಯಿತು.

ದಿನಗಳು ಒಂದಾದ ಮೇಲೊಂದು ಉರುಳುತ್ತಿದ್ದವು. ಶುಕ ಆ ದಿನ ಬೆಳಗಿನ ಸಮಯದಲ್ಲಿ ಎಲ್ಲಿಯೋ ಸಮಿಧೆಗಳನ್ನಾಯಲು ಹೋಗಿರಬೇಕು. ಸಹಕಾರಿಗಳು ತಮ್ಮ ಎಲೆಮನೆಗಳಲ್ಲಿ ಕಾರ್ಯನಿರತರಾಗಿದ್ದರು. ನಾನು ಆಶ್ರಮದ ಮೊಗಸಾಲೆಯಲ್ಲಿ ಚಾಪೆಯ ಮೇಲೆ ಕುಳಿತುಕೊಂಡು ಕೃಷ್ಣ ಚರಿತ್ರೆಯನ್ನು ಮತ್ತೆ ಮತ್ತೆ ಓದುತ್ತಿದ್ದೆ. ನಾನು ನಿವಾರಿಸಿದರೂ ನನ್ನ ಕಣ್ಣು ಧಾರೆಗೊಂಡು ಹರಿಯುತ್ತಿದ್ದವು. ಈಗ ನಾನು ಕುರುಕ್ಷೇತ್ರದಿಂದ ಬಂದ ಬಳಿಕ ಕೃಷ್ಣ ಚರಿತ್ರೆಗೆ ಮತ್ತೊಂದು ಅಧ್ಯಾಯ ಜೋಡಿಸಿದ್ದೆ.

ನಾನು ಶುಕನಿಗೇ ಅದನ್ನು ಬರೆಯಲು ಹೇಳಿದ್ದೆ. ಆದರೂ ನಾನೇ ಬರೆಯುವ ಚಪಲ ತೀರಲೊಲ್ಲದು. ನನಗೆ ಕೃಷ್ಣನ ಬಗ್ಗೆ ಅಷ್ಟು ಮೋಹವೇ ಆವರಸಿತ್ತು. ಬರೆಹದ ಓಲೆಗಳನ್ನು ಒಂದೊಂದನ್ನೇ ಪೀಠದ ಮೇಲಿಡುತ್ತ ಕಣ್ಣೊರಸಿಕೊಂಡೆ. ಮುಂಜುಮಂಜಾದ ಆ ಬೆಳಕಿನಲ್ಲಿ ನಮ್ಮ ಅಂಗಳದಲ್ಲಿ ಯಾರೋ ಬಂದಂತೆ ಆಯಿತು.

ನಾನು - '' ಯಾರು ? '' ಎಂದೆ.

ಯಾರಿಂದಲೂ ಉತ್ತರವಿಲ್ಲ. ಆದರೆ ದೂರದಲ್ಲಿದ್ದ ಕಪ್ಪನೆಯ ಆಕೃತಿ ಸಮೀಪಕ್ಕೆ ಬಂದಂತಾಯಿತು. ನಾನು ಕಂಬನಿಯಿಂದ ತೊಳೆದು ಸ್ವಚ್ಛವಾದ ಕಣ್ಣುಗಳನ್ನು ಆಗಲ ಮಾಡಿ ನೋಡಿದೆ.

ಯಾವನೋ ದ್ರಾತ್ಯ ಬರುತ್ತಿರುವಂತೆ ಕಂಡಿತು. ಯಾರು ಎಂಬುದನ್ನು ನಾನು ಗುರುತು ಮಾಡಲಿಲ್ಲ. ಆತ ಇನ್ನೂ ಬಂದು ಕಟ್ಟೆಯ ಕೆಳಗೆ ಕುಳಿತುಕೊಂಡ. ನಾನು ಮತ್ತೆ "ಯಾರು ನೀನು?" ಎಂದು ಕೇಳಿದೆ. ಆತ ಉತ್ತರ ಕೊಡಲಿಲ್ಲ. ಆದರೆ ಆತ ಮತ್ತೊಂದು ಹೆಜ್ಜೆ ಕಟ್ಟೆಯ ತುದಿಗೆ ಬಂದ.

ಯಾವನೋ ಶಾಮಕಾಯದ ದೊಡ್ಡ ಆಳು ಕುಳಿತಿದ್ದಾನೆ. ನಾನು ಆಶ್ಚರ್ಯದಿಂದ ಅವನ ಕಡೆಗೆ ನೋಡಿದೆ. ಆತನನ್ನು ನೋಡಿದರೆ ಹೆದರಿಕೆ ಯಾರಿಗೂ ಬರಬೇಕು. ಅಂತಹ ಶರೀರ ಅವನದು. ಆದರೆ ಯಾವುದೋ ಭಯದಿಂದ ತಾನೇ ಮುದ್ದೆಯಾಗಿದ್ದಾನೆ. ಇದೇ ಈಗ ಒಂದು ಕ್ಷಣದ ಹಿಂದೆ ಶಾಂತನಾದ ಬೆಂಕಿಯಂತೆ ತೋರುತ್ತಿದ್ದ ಆತ. ಮೂರು ಸಲ ಮಾತನಾಡಿಸಿದರೂ ಮಾತನಾಡಲಿಲ್ಲ.

"ಯಾರಯ್ಯಾ ನೀನು, ಯಾರು...? ಮಾತನಾಡುವುದಿಲ್ಲವೆ?"

"ನಾ-ನೊ-ಬ್ಬ-ಪಾ-ಪಿ!"

27393

"ಈ ಲೋಕದಲ್ಲಿ ಬದುಕುವ ಎಲ್ಲರೂ ಒಂದು ಅರ್ಥದಲ್ಲಿ ಪಾಪಿಗಳೇ. ನೀನೊಬ್ಬನೆ ಪಾಪಕ್ಕಾಗಿ ಏಕೆ ಅಷ್ಟು ನೋವುಗೊಂಡಿದ್ದಿ? ಹೇಳಪ್ಪ ನೀನು ಯಾರು? ಎಲ್ಲಿಯವ?"

"ಪೂಜ್ಯರು, ನನ್ನ ಮುಖವನ್ನು ನೋಡಬಾರದು. ಅಂತಹ ಕಡು ಪಾಪಿ! ಮಹಾಮಹಿಮರಾದ ತಮ್ಮನ್ನು ಕಂಡಾಗ ನನ್ನನ್ನು ಸುಡುತ್ತಿರುವ ಪಾಪದ ಉರಿ ಸ್ವಲ್ಪ ಕಡಿಮೆಯಾದೀತೆಂದು ಮಾತನಾಡಲು ನಾಲಗೆ ತೋರಿಸಲು ಮುಖ ಉಳಿದಿದೆ.-"

"ಅದಿರಲಿ ಮೊದಲು ನೀನು ಯಾರು ಹೇಳು?"

"ನಾನೊಬ್ಬ ಯಾರಿಗೂ ಬೇಡಾದ ಬೇಡ. ಪ್ರಭಾಸ ಕ್ಷೇತ್ರಕ್ಕೆ ಹೊಂದಿದ ಕಾಡಿನಲ್ಲಿ ಬೇಟೆಯಾಡಿ ಬದುಕುವವ."

"ಇರಲಿ. ಈಗ ಏನು ಕಾರಣ ಬಂದಿದ್ದೀಯಾ?"

"ನಿಮ್ಮನ್ನು ಕಾಣಲೆಂದು ಬಂದಿದ್ದೇನೆ"

"ಯಾರಪ್ಪ ನನ್ನನ್ನು ಕಾಣು ಅಂತ ನಿನಗೆ ಹೇಳಿದರು? ಇಲ್ಲವೆ ನೀನೇ ಬಂದಿದ್ದೀಯಾ?"

"ಇಲ್ಲ ಸ್ವಾಮಿ, ತಮ್ಮಂತಹ ಪುಣ್ಯಾತ್ಮರಿದ್ದರೂ ಈ ಪಾಪಿಗಳಿಗೆ ಹೇಗೆ ಗುರುತಾಗಬೇಕು? ನಮ್ಮ ಸ್ವಾಮಿ ಯದುಪತಿ ಶ್ರೀ ಕೃಷ್ಣ, ತಮ್ಮನ್ನು ಕಂಡು ಹೋಗು ಎಂದು ಹೇಳಿದರು........"

ಆತನ ಧ್ವನಿ ತುಂಬ ಸವೆದು ಹೋಗಿತ್ತು. ನಾಲಗೆ ಸೇದಿಕೊಂಡಂತೆ ಆತ ಮೇಲಿಂದ ಮೇಲೆ ಉಗುಳು ನುಂಗಿ ಮಾತನಾಡುತ್ತಿದ್ದ. ಕೊನೆಯ ಮಾತು ಹೇಳಿದವನೆ ತನ್ನ ಎರಡೂ

ಕೈಗಳಿಂದ ಮುಖ ಮುಚ್ಚಿಕೊಂಡ. ಅವನ ನಡತೆ ಬಹು ವಿಚಿತ್ರವೆನ್ನಿಸಿತು. ಶ್ರೀ ಕೃಷ್ಣನ ಹೆಸರು ಆತ ಹೇಳಿದ ಕೂಡಲೆ ನಾನು ಆತನನ್ನು ಬಹು ಆತುರತೆಯಿಂದ ಕೇಳಿದೆ--

''ಶ್ರೀ ಕೃಷ್ಣ ಕುಶಲನೆ? ಈಗ ಎಲ್ಲಿ ಪ್ರಭಾಸದಲ್ಲಿರುವನೇ ಯದುಪತಿ?''

''ಅಯ್ಯೋ ಇನ್ನೆಲ್ಲಿಯ ಯದುಪತಿ? ಆ ದೊಡ್ಡ ಜೀವವನ್ನು ಈ ಪಾಪಿಯ ಕೈ ಕೊಲೆ ಮಾಡಿತು...''

ನಾನು ಹೌಹಾರಿ ಹೋದೆ. ಇಷ್ಟು ಹೇಳಿದವನೇ ಆತ ಕುಳಿತಲ್ಲಿಂದಲೆ ಬಿದ್ದು ಮೂರ್ಛೆ ಹೋದ.

ನಾನು ಕಂಬ ನೆಮ್ಮಿ ಕುಳಿತಂತೆಯೇ 'ಹಾಯ್ ಕೃಷ್ಣ' ಎಂದೆ. ನನಗೇಕೋ ವಿಚಿತ್ರ ವೇದನೆಯಾಯಿತು. ಕೂಗಬೇಕೆಂದರೆ ಸಮೀಪದಲ್ಲಿ ಯಾರೂ ಇಲ್ಲ. ನಾನೇ ಕಟ್ಟೆ ಇಳಿದು ಕೆಳಗೆ ಬಂದೆ. ಅಲ್ಲಿಯೆ ಇದ್ದ ನೀರಿನಿಂದ ಅವನಿಗೆ ಉಪಚಾರ ಮಾಡಿದೆ. ಆಶ್ರಮದಲ್ಲಿ ಮಧ್ಯಾಹ್ನ ಭೋಜನ ಸಮಯವಾದ್ದರಿಂದ ಜನ ಬಂದರು. ಈ ದೃಶ್ಯವನ್ನು ನೋಡಿ ಹೌಹಾರಿ ಹೋದರು. ಬೇಡ ಎಚ್ಚರಗೊಂಡ.

''ಹೇಳು... ಏನು ಸಂಗತಿ ಹೇಳು'' ಎಂದೆ. ಆತ ಏನೇನೋ ತುಂಬ ಹೇಳಿದ. ನನಗೆ ಕೇಳುವ ತಾಳ್ಮೆ ಉಳಿಯಲಿಲ್ಲ. ಎರಡು ಮಾತು ನೆನಪಿನಲ್ಲಿ ಉಳಿದವು.

''ಮರದಡಿಯಲ್ಲಿ ಯದುಪತಿ ಕೊಳಲು ನುಡಿಸುತ್ತ ಒಂದು ಕಾಲ ಮೇಲೆ ಇನ್ನೊಂದನ್ನು ಇಟ್ಟು ನಿಂತಿದ್ದ. ದೂರದಿಂದ ನಾನು ಅವನ ಕೆಂದಳಿರ ಅಡಿಯನ್ನು ಮೃಗವೆಂದು ಬಗೆದು ಬಾಣ ಹೂಡಿದೆ. ಜನವನ್ನು ಬದುಕಿಸುವ ದೇವರು ನನ್ನ ಬಾಣದ ನೆವ ಮಾಡಿ ಅಸು ನೀಗಿದರು.....''

''ನಾನು ಹತ್ತಿರ ಹೋದಾಗ ಮುಖದಲ್ಲಿ ಅದೇ ಮಂದಹಾಸ ಇತ್ತು. ದೇವರು ಹೇಳಿದರು--

''ದಾರುಕ, ನನ್ನದೊಂದು ಮಾತು ನಡೆಸು. ಇಂದು ಇಲ್ಲಿ ನಡೆದ ಕತೆಯನ್ನು ವ್ಯಾಸರಲ್ಲಿ ಹೋಗಿ ಹೇಳು. ಎಂದರು. ಇಲ್ಲಿಗೆ ಬಂದೆ--'' ಎಂದು ಹೇಳಿದವನೇ ಬಿದ್ದವನು ಪುನಃ ಏಳಲಿಲ್ಲ. ಅಂದು ನಾನು ಕೃಷ್ಣ ಚರಿತಾಮೃತವನ್ನು ಮುಗಿಸುವ ವಿಚಾರ ಮಾಡಿದ್ದೆ. ಆಯಿತು.

ಕೃಷ್ಣನ ನಿಧನದಿಂದ ನನ್ನ ಜೀವಿತದ ಬಹು ಭಾಗವು ಕುಸಿದು ಹೋಯಿತು. ಯಾರನ್ನು ನನ್ನ ಜೀವನ ಸರ್ವಸ್ವವೆಂದು ಭಾವಿಸಿದ್ದೆನೋ ಆ ಕೃಷ್ಣ ಹೊರಟು ಹೋಗಿಬಿಟ್ಟ.

ನನಗೆ ಬಳಿಕ ಕಳೆಯುವ ಒಂದೊಂದು ದಿನವೂ ಭಾರವಾಗುತ್ತ ಬಂದವು. ನಾನು ನಿತ್ಯವೂ ಶುಕನಿಂದ ಕೃಷ್ಣ ಚರಿತವನ್ನು ಓದಿಸಿ ಕೇಳುತ್ತಿದ್ದೆ. ಆದರೆ ಆ ತೃಪ್ತಿ- ಹಿಗ್ಗು ಬರಲಾರದಂತೆ ಹೋಗಿದ್ದವು.

ಒಮ್ಮೆ ಶುಕ ತಾನು ಗಂಗೋತ್ರಿಗೆ ತಪಸ್ಸಿಗಾಗಿ ಹೋಗುವುದಾಗಿ ಹೇಳಿದ. ನಾನು ಆತನನ್ನು ಎಂದೂ ಏತಕ್ಕೂ ತಡೆದಿರಲಿಲ್ಲ. ಶುಕ ಹೊರಟು ಹೋದ. [illegible] ಸಹಕಾರಿಗಳಲ್ಲದೆ ಜತೆಯಾಗಿ ನಾರದರೂ ಇದ್ದರು.

ಶುಕ ಹೋಗಿ ಎರಡು ಪಕ್ಷಗಳು ದಾಟಿರಬೇಕು. ಒಂದು ದಿನ ನಾರದರೇ ಹೇಳಿದರು.

ಇಂದು ಬೆಳಿಗ್ಗೆ ತಾವು ಸವಿತೃ ಮಂಡಲವನ್ನು ವೀಕ್ಷಿಸುವಾಗ ಶುಕ ಅವರ ಮಧ್ಯದಲ್ಲಿ ಕಾಣಿಸಿಕೊಂಡ, ನನಗೆ ಆತ ಹೇಳಿದ್ದ: ನಾನು ಯೋಗ ವಿಧಿಯಿಂದ ಸವಿತೃ ಮಂಡಲ ಸೇರುವವನಿದ್ದೇನೆ ಎಂದು.

'ವ್ಯಾಸ, ಇಂದು ಶುಕ ತಿರುಗಿ ಬರದಂತೆ ದೇವಲೋಕ ಸೇರಿದ.'

ನನ್ನ ಆಕಾಂಕ್ಷೆ ಅದೇ ಆಗಿತ್ತು. ನನ್ನ ಸಂತಾನ, ಅವಿರತ ದೇವ ಜೀವನವನ್ನು ಬದುಕಲಿ. ಅನಂತ ಕಾಲ ಆತನಿಗೆ ದೇವ ಸನ್ನಿಧಿ ಸಿಗಲಿ ಎಂದಿತ್ತು. ಶುಕ ನನ್ನ ಸಂತಾನವಾಗಿ ಅದನ್ನು ಪೂರೈಸಿದ.

ನಾನು ಒಮ್ಮೆಲೆ ಏನನ್ನೋ ಕಳೆದುಕೊಂಡಂತೆ ಎನ್ನಿಸಿತು. ಬದುಕು ಭಾರವೆನ್ನಿಸತೊಡಗಿತ್ತು. ಆದರೆ ನನಗೆ ಸಿಕ್ಕ ಸಂಸ್ಕಾರ ಬಹಳ ಪ್ರಬಲವಿತ್ತು. ಶುಕ ಹೊರಟು ಹೋದುದಕ್ಕೆ ನನಗೇಕೋ ತುಂಬ ಅಶಕ್ತತೆ ಎನ್ನಿಸಹತ್ತಿತು.



ದಿನಗಳು ನಿಲ್ಲುತ್ತವೆಯೆ? ಘಟನೆ ಎಂತಹ ಘೋರವೇ ನಡೆಯಲಿ, ಅಪೇಕ್ಷಣೀಯವೇ ನಡೆಯಲಿ ಕಾಲ ಸಾಗುತ್ತಲೇ ಇರುತ್ತದೆ. ನನಗೆ ನನ್ನ ಜೀವಿತದ ಒಂದೊಂದೇ ಘಟನೆಗಳು ನೆನಹಿನಿಂದ ಮತ್ತೆ ನನ್ನೆದುರು ಬಂದು ಕುಣಿದಾಡಹತ್ತಿದವು. ನಾನು ನಾರದರನ್ನು ಕೇಳಿದೆ-

'' ದೇವತೆಗಳನ್ನು ಕಂಡೆ- - ಅವರ ಬದುಕನ್ನು ಹತ್ತು ಮುಖದಿಂದ ಹಾಡಿದೆ- ಅಸುರರನ್ನು ಹಲವು ಪರಿಯಿಂದ ಚಿತ್ರಿಸಿದೆ- ಆದರೂ ನನಗಿನ್ನೂ ಏನನ್ನೋ ಹೇಳಬೇಕೆಂಬಾಸೆ ತಣಿಯಲಿಲ್ಲ. ಲೋಕದಲ್ಲಿ ಯಾರೂ ಹೇಳಲಾರದ್ದನ್ನು ಹೇಳಲಾದಷ್ಟನ್ನು ಹೇಳಿದೆ. ಇಷ್ಟಾದರೂ ಹೇಳುವ ಹಂಬಲ ಮುಗಿದಿಲ್ಲ.''

ನನ್ನ ದಿನಗಳು ಮುಗಿದಿದ್ದವು. ಇತ್ತೀಚೆ ದೇಶ ತನಗೆ ತಿಳಿದ ಹಾದಿ ತುಳಿಯುತ್ತಿತ್ತು. ನನ್ನ ಕಡೆಗೆ ಯಾರಾದರೂ ಋಷಿಗಳು ಬಂದಾಗ ದೇಶದ ಸ್ಥಿತಿ ಕೇಳಿ ಮರುಕ ಬರುತ್ತಿತ್ತು.

ಒಂದು ಕಾಲದಲ್ಲಿ ನಾನು ಹಾಕಿದ ಗೆರೆ ದಾಟುವ ಧೈರ್ಯ ಇಡಿಯ ಭಾರತ ವರ್ಷಕ್ಕೆ ಇದ್ದಿಲ್ಲ. ಆದರೆ ಇತ್ತೀಚೆ ನನ್ನ ಬಂಧನ ಶಿಥಿಲವಾಗಿತ್ತು. ನೂರು ಸಮಾಜಗಳನ್ನು ಹತ್ತಾರು ಚಕ್ರವರ್ತಿಗಳನ್ನು ನಡೆಸಿದ ನಾನೇ ಇಂದು ಅಸಹಾಯಕನಾಗಿದ್ದೆ. ಜಗದ ಈ ಉಚ್ಚ ೦ಖಲತೆಯನ್ನು ನೋಡಿ ರೋಸಿ ಹೋದೆ. ನಾನು ಜೀವಿಸಿರುವಾಗಲೆ ನನ್ನ ನಿಯಮಗಳಿಂದ

ಜಗ ಬಹಳ ದೂರ ಹೋಯಿತು. ಒಮ್ಮೆ ಋಚೀಕ, ಭವ್ಯರು ನನ್ನ ಆಶ್ರಮಕ್ಕೆ ಬಂದು ಜಗದ ಬಗ್ಗೆ ಹೇಳಿದಾಗ ನನಗೆ ಸಾಕಷ್ಟು ರೇಗಿತ್ತು.

ನಾನು ಅವರಿಗೆ ಹೇಳಿದೆ:

"ನಾನು ಕೈ ಎತ್ತಿ ಕೂಗುತ್ತೇನೆ. ಈ ಹಣ್ಣು ಸ್ಥಿತಿಯಲ್ಲಿ ಯಾರು ನನ್ನನ್ನು ಕೇಳಬೇಕು?" ಅಂತೂ ಕಾಲ ನಾನಿರುವಾಗಲೇ ಜಗತ್ತನ್ನು ದೂರ ಕರೆದೊಯ್ದಿತು.

ನೆನಪುಗಳೂ ಈಗೀಗ ಚದುರ ಹತ್ತಿವೆ. ನಾನು ನನ್ನ ಜೀವಿತದಲ್ಲಿ ನಂಬಿದ ಕೃಷ್ಣನನ್ನು ಅರ್ಧದಲ್ಲಿಯೆ ಬಿಟ್ಟು ಹೊರಟು ಹೋದ. ನನ್ನ ಕನಸನ್ನು ನನಸಾಗಿ ಮಾಡುವನೆಂಬ ಭರವಸೆಯಿಂದ ನನ್ನ ಶಕ್ತಿ, ಸಂಕಲ್ಪದಿಂದ ಪಡೆದ ಮಗ ದೇವರುಗಳೊಡನೆ ಅಮರನಾಗಿ ಬದುಕಿದನೇನೋ ನಿಜ. ಆದರೆ ಆ ಬಾಳು ಭೂಮಿಯ ಮೇಲಿರಲಿ ಎಂದು ನನ್ನ ಆಸೆ ಇತ್ತು. ನನ್ನ ವೈರಾಗ್ಯ ಪ್ರವೃತ್ತಿ ಶುಕನನ್ನು ಸ್ವರ್ಗಕ್ಕೆ ಕಳಿಸಿತು.

ನನ್ನ ಚಿತ್ತ ತನ್ನ ವಿಕೀರ್ಣ ಸ್ಮೃತಿಗಳನ್ನು ಸಿಕ್ಕಂತೆ ಚೆಲ್ಲಿ ಆರಿಸುತ್ತ ಕೂಡುವುದನ್ನು ನಾರದರು ಗಮನಿಸಿದರು.

''ನಾರದರೆ, ನಾನು ನನ್ನ ಕೊನೆಯ ರಚನೆಯೊಂದನ್ನು ಮುಗಿಸಬೇಕೆಂದಿದ್ದೇನೆ. ಆದರೆ ಶಾರೀರಿಕ ಅಶಕ್ತತೆ.......''

ನಾರದರಿಗೆ ನನ್ನ ತೊಂದರೆ ತಿಳಿದಿತ್ತು.

''ಮುನಿವರ್ಯರೆ, ನಿಮ್ಮ ನೆರವಿಗೆ ಸ್ವರ್ಗದಿಂದ ನಾನು ಸಹಾಯ ಕಳಿಸುತ್ತೇನೆ-''

ನಾರದರು ಸ್ವರ್ಗಕ್ಕೆ ಹೊರಟು ನಿಂತರು. ಅವರು ಹೊರಟು ಹೋಗುವುದು ಇದೇ ಮೊದಲ ಸಲವಲ್ಲ. ಆದರೆ ನನಗೇಕೋ ಕೊನೆಯ ಸಲವೆನ್ನಿಸಿತು. ಅವರು ಹೋಗಬಾರದೇನೋ ಎನ್ನಿಸಿದಂತಾಯಿತು. ನಾರದರ ಮೇಲೆ ಲೋಕಾಂತರ ವ್ಯವಹಾರಗಳ ಹಲವು ಹೊಣೆಗಳಿದ್ದವು. ಅವರನ್ನು ನಾನು ಎಂದೂ ತಡೆದಿಲ್ಲ. ಅವರು ಕೊನೆಗೆ ಒಂದು ದಿನ ಹೋದರು. ದಿನಗಳು ಒಂದೊಂದರಂತೆ ಹಲವು ಕಳೆದವು.

ನನಗೆ ಜೀವಿತ ಏಕೋ ನಿರಾಲಂಬ ಎನ್ನಿಸಿತು. ಎಂದಿನಂತೆ ರಾತ್ರಿಯನ್ನು ಹೇಗೋ ಕಳೆದು ಮರು ದಿನ ಬೆಳಗಿನಲ್ಲಿ ಸವಿತೃ ದೇವನಿಗೆ ಅರ್ಘ್ಯ ಪೂರೈಸಿ ನನ್ನ ಅಭ್ಯಾಸಿಕೆಗೆ ಬಂದು ಕುಳಿತೆ.

ನಾನು ಕುಳಿತುಕೊಂಡ ಕೂಡಲೆ ಒಂದು ವ್ಯಕ್ತಿ ಎದ್ದು ನಿಂತಿತು. ನಾನು ನಿಟ್ಟಿಸಿ ನೋಡಿದೆ. ಅದೇ ವಿಚಿತ್ರ ಆಕೃತಿ! ವಕ್ರತುಂಡ-ಮಹಾಕಾಯ ಲಂಬೋದರ, ಬಾಯಿಯಿಂದ ಹೊರಗೆ ಇಣುಕುತ್ತಿರುವ ಏಕದಂತ! ನಾನು ಕೂಡಲೆ ಆತನನ್ನು ಗಣೇಶ ಎಂದು ಗುರುತಿಸಿದೆ, ವಂದಿಸಿದೆ. ಆತ ಕೂಡ ನಾನು ಮಹರ್ಷಿ ಎಂಬ ಗೌರವದಿಂದ ಪ್ರತಿವಂದನೆ ಸಲ್ಲಿಸಿದ. ಕೂಡಲೆ ಆತನು, ಸ್ವರ್ಗದ ಆಧಿಪತ್ಯದಿಂದ ತಾನು ನನ್ನ ಲಿಪಿಕಾರನೆಂದು ನಿಯುಕ್ತನಾಗಿ ಬಂದ ಸಮಾಚಾರ ಹೇಳಿದ. ನನಗೆ ತುಂಬ ಸಂತೋಷವಾಯಿತು. ಏಕೆಂದರೆ ನಾನು ಬರೆಯಬೇಕಾದ ಕತೆ-ನನ್ನ

ಮನೆತನದ್ದಿತ್ತು. ಅದರಲ್ಲಿ ನನ್ನದೇ ಮುಕ್ಕಾಲು ಪಾಲು ಇತ್ತು. ಭಾವನೆಗಳು ಕತೆಗಳನ್ನು ಕಟ್ಟಿಕೊಂಡು ನುಗ್ಗಿ ಬರುತ್ತಿದ್ದವು. ಹೇಳಲು ಶಬ್ದಗಳೇ ಸಾಲದಷ್ಟು ಅನುಭವದ ಒಟ್ಟಿತ್ತು. ಅಂತಹದರಲ್ಲಿ ವೃದ್ಧನಾದ ನಾನು ನನ್ನ ಹಣ್ಣು ಕೈಗಳಿಂದ ಹೇಗೆ ಬರೆಯಬೇಕು? ಅಂತೂ ಕೊನೆಗೆ ಒಂದು ಉಪಕಾರ ಮಾಡಿದರು- ಒಂದೇಕೆ? ನನ್ನ ಜೀವಿತದಲ್ಲಿ ನಾರದರು ಮಾಡಿದ ಉಪಕಾರ ಅನಂತ.

ದೇವರ ಕತೆ ಬರೆದೆ, ದೇವಾಧಿದೇವನ ಜೀವನವನ್ನು ಬರೆದೆ- ಆದರೆ ಈಗ ನಾನು ಮರಳಿ ಮನೆಗೆ ಬಂದೆ- ಅಂತಹ ಮಹಾಕೃತಿಗಳನ್ನೆಲ್ಲ ಬರೆದ ನಾನು ಇಂದು ನನ್ನ ಮನೆಯ ಹಾಡು ಹೇಳುವೆ ನನ್ನ ಮನೆಗಾಗಿ ಜಗತ್ತು, ಜನಪಟ್ಟ ಪಾಡು ನಾನು ಹೇಳಬೇಕೆನ್ನಿಸಿತು. ನಾನು ಇನ್ನೇನನ್ನು ಹೇಳುವುದಿದೆ-?

''ವ್ಯಾಸ, ನೀನು ತುಂಬ ದೊಡ್ಡ ಮುನಿ, ಮನೆತನದ ಇತಿಹಾಸ ಹೇಳುವ ಚಪಲ ಏಕೆ?

ನನ್ನ ಬದುಕು ಬರಿ ಆರಣ್ಯಕವೂ ಆಗಿಲ್ಲ. ಅದರಲ್ಲಿ ದೇವತೆಗಳ ತೊಡಕಿದೆ. ಮಾನವರ ಒಡಕಿದೆ. ದಾನವರ ಕೆಡಕೂ ಅದರಲ್ಲಿ ಅಡಗಿದೆ- ನನ್ನ ದೇಶಕ್ಕೆ ನಾನು ಬಾಳಿದ್ದು, ದೊಡ್ಡ ಮನೆ- ನನಗೆ ತುಂಬ ಸ್ಮೃತಿಗಳು ಪುಂಖಾನುಪುಂಖವಾಗಿ ತೂರಿಬಂದವು. ನಾನು ಗಣೇಶನಿಗೆ ಹೇಳಿದೆ-

''ನಾನು ಹೇಳಿದ್ದನ್ನು ಅರ್ಥ ಮಾಡಿಕೊಂಡು ಬರೆಯುತ್ತಾ ಹೋಗು''

ನನಗೆ ಇರುಳುಗಳು ಹಗಲಾದವು. ಗಣೇಶ ಮಹಾ ಕಾಯನಾದರೂ ಅವಿಶ್ರಾಂತ ಪರಿಶ್ರಮಿ. ಆತನೇ ವಿಘ್ನೇಶನಾಗಿದ್ದರಿಂದ ತಡೆ- ಎಲ್ಲಿರಬೇಕು? ನೆನಪುಗಳು ಹಿಂಡುಗಟ್ಟಿಕೊಂಡು ಒಂದರ ಮೇಲೊಂದು ನುಗ್ಗಿ ಪಾಂಕ್ತವಾಗಿ ಬಂದವು. ನಾನು ಸ್ಮೃತಿಗಳನ್ನೆಲ್ಲ ನನ್ನ ಹೃದಯದಿಂದ ಹೊರಗೆ ಹಾಕಿದ್ದರಿಂದ ಹೃದಯ ಹಗುರೆನ್ನಿಸಿತು.

ಅಂತೂ ಒಂದು ದಿನ ಕತೆ ಮುಗಿಯಿತು. ನನ್ನ ಜೀವಿತ ಈಗ ತಣ್ಣಗಿನ ಬೆಂಕಿ!

ವ್ಯಾಸ ಇನ್ನು ಮುಂದೆ ಕತೆಯಲ್ಲಿ ಚಿರಂಜೀವಿ. ಗಣೇಶ ಬರೆದ ಕತೆಯನ್ನು ಇನ್ನೊಮ್ಮೆ ಓದಿದೆ. ನನ್ನ ಕತೆ ನಿಜವಾಗಿಯೂ ಮುಗಿದಿತ್ತು. ನಾನು ಶಾಂತ ನಾದೆ.





....ನಾನು ಕೃಷ್ಣನ ಜೀವನವನ್ನು ಕಂಡು ಮುಗ್ಧನಾಗಿಹೋದೆ. ನನ್ನ ಬರಹಕ್ಕೆ ಆತನೇ ನಾಯಕನಾದ. ಈ ಅವಧಿಯಲ್ಲಿ ನಾನು ಭಾಗವತವನ್ನು ಬರೆದೆ ನನ್ನ ಸಾರಸ್ವತಸಮಗ್ರ ಶಕ್ತಿಯನ್ನು ಅದರಲ್ಲಿ ಹಾಕಿದೆ. ಇತರ ಪುರಾಣಗಳಿಗಿಂತ ಅದು ನನ್ನ ಹೃದಯವನ್ನು ಬಹಳ ಸೂರೆಗೊಂಡಿತ್ತು. ನಾನು ಅದನ್ನು ಮಂತ್ರಮಯವಾಗಿಸಬೇಕೆಂದಿದ್ದೆ, ಆದರೆ ಕೃಷ್ಣನ ವಿಷಯದಲ್ಲಿ ನನ್ನ ಅನಿಸಿಕೆಗಳು ಭಾವನೆಯ ಆವೇಗದಲ್ಲಿದ್ದವು. ನನ್ನ ಸಹಕಾರಿಗಳು ಅದನ್ನು ಮಂತ್ರಸಾಮರ್ಥ್ಯವುಳ್ಳ ಮಹಾಕೃತಿ ಎಂದರು. ಅದು ಶ್ರದ್ಧೆಯ ಫಲ. ಆದರೆ ನನಗೆ ಗೊತ್ತು, ನಾನು ಕೃಷ್ಣಸನ್ನಿಧಿಯಲ್ಲಿದ್ದರೂ ಹೃದಯದ ಉಕ್ಕಿನಿಂದ ಭಾವನೆಗಳನ್ನು ಸ್ತಿಮಿತದಲ್ಲಿಡಲಾಗಲಿಲ್ಲ. ನನಗೆ ಕೃಷ್ಣನಿದ್ದರೆ ತಪಸ್ಸು, ಜ್ಞಾನ, ಸಂಯಮ, ಸತ್ಯ - ಏಕೆ ಬೇಕು ಎನ್ನಿಸುತ್ತಿತ್ತು. ಇಷ್ಟು ಹುಚ್ಚು ಕೃಷ್ಣನ ಬಗ್ಗೆ ನನಗೆ!